# ತಿರಕರ ಪಿಡುಗು

(ಹಾಗೂ ಎರಡು ಹುಚ್ಚಾಟಗಳು)

# ತಿರಕರ ಪಿಡುಗು





ಸಂಪಾದಕರು:

ಶ್ರೀ ಕೃಷ್ಣಕುಮಾರ ಕಲ್ಲೂರ

ಶ್ರೀ ಕೃಷ್ಣಶರ್ಮಾ ಬೆಟಗೇರಿ

ಗೆಳೆಯರ ಗುಂಪು



ಜಯಕರ್ನಾಟಕ ಗ್ರಂಥಮಾಲೆ

ಧಾರವಾಡ

# ಎರಡು ನುಡಿ

ಈ ಪುಸ್ತಕದಲ್ಲಿ ಮೂರು ಹುಚ್ಚಾಟಗಳನ್ನು ಕೊಟ್ಟಿದ್ದೇವೆ. ಹುಚ್ಚಾಟಗಳು ಹೆಸರಿಗೆ ಹುಚ್ಚಾಟಗಳಾಗಿದ್ದರೂ, ಅವು ಒಳಹೊಡೆತದವಿರುವುದೇ ಹೆಚ್ಚು. ಮಾರ್ಮಿಕವಾದ ನಗೆಯ ಚಿತ್ರ(Cartoon)ದಂತೆ, ಇಲ್ಲವೆ ಸೂಕ್ಷ್ಮವಾದ ಅಣಕ (Satire)ದಂತೆ ಇಲ್ಲವೆ ಜಾಣತನದ ಟೀಕೆ(Criticism)ಯಂತೆ ಅವುಗಳ ಕೆಲಸ. ಈ ಪುಸ್ತಕದಲ್ಲಿ ಕೊಟ್ಟ ಮೊದಲನೆಯವೆರಡು ಹುಚ್ಚಾಟಗಳು ಒಂದೇ ಪಾತ್ರದ ದೃಶ್ಯಗಳು(Monodramas) ಎನ್ನಬಹುದು. ಮೂರನೇಯದು ಒಂದಂಕಿನದೊಂದು ನಾಟಕ. ಅದಕ್ಕೆ ನಾಟಕಕಾರರು 'ಒಂದು ಚಿತ್ರ, ಅಲ್ಲ ಕಕ ಪೇರು' ಎಂದಿದ್ದಾರೆ; ಎಂದರೆ ಅದರಲ್ಲಿ ನಾಟಕಕಾರರು ತಮ್ಮ ಮನಸ್ಸೆಂಬ ತಕಬೀರುಯಂತ್ರ(Camera)ದಿಂದ, ನಮ್ಮ ಹಳ್ಳಿಯ ಸಮಾಜದ ಕೆಲವು ದೃಶ್ಯಗಳನ್ನು ಮೂಡಿಸಲು ಯತ್ನಿಸಿದ್ದಾರೆ. ಇದರಲ್ಲಿ ಕಥಾವಸ್ತುವಿಗಿಂತ ಚಿತ್ರಕ ವಸ್ತುವಿಗೇ ಹೆಚ್ಚು ಪ್ರಾಧಾನ್ಯವೆನ್ನಬೇಕು. ಇಂದಿನ ಸಮಾಜದಲ್ಲಿ 'ರಾಯರ ಮದುವೆ'ಯಲ್ಲಿ ಬಣ್ಣಿಸಿದ ಅನೇಕ ನೋಟಗಳು ಕಂಡುಬರುವದುಂಟು. ಇದರಲ್ಲಿದ್ದ ಕತೆಯು ನಿಜವಾಗಿಯೂ ನಡೆದುದೆಂದು ನಾಟಕಕಾರರೇ ಹೇಳುತ್ತಾರೆ. ಸಮಾಜದಲ್ಲಿ ಬಹುಶಃ ನಾವೆಲ್ಲ ಕಂಡದ್ದನ್ನೇ ನಾಟಕಕಾರರು ಇಲ್ಲಿ ಚಿತ್ರಿಸಿದ್ದಾರೆ. ಸಿನೇಮಾ ಫಿಲ್ಮಿನಲ್ಲಿ ಒಂದರ ಹಿಂದೊಂದು ಚಿತ್ರಗಳು ಹೆಣೆದಿರುವಂತೆ, ಈ ನಾಟಕದಲ್ಲಿಯ ನೋಟಗಳು ಹೆಣೆದಿರುವವು. ನಮ್ಮ ಸಮಾಜದ ಅನೇಕಾನೇಕ ಚಿತ್ರಗಳನ್ನು ಹೀಗೆಯೆ ಅನಂತವಾಗಿ ಚಿತ್ರಿಸುತ್ತ ಹೋಗಬಹುದು. ಅದಕ್ಕೆ ಮುಗಿವೆಲ್ಲಿ? 'ರಾಮಾಚಾರಿ'ಯಂಥ ಕಂತ್ರಿಗೆಗೊಯ್ಯರ 'ಶ್ರೀಮಂತನಾಥ' ನಾಚಿಕೆಗೇಡಿಗಳ ಆಸಿಗೆ ಅಂಕವಿದ್ದರೆ, ಅಲ್ಲವೆ!!!

'ಪ್ರಕಾಶಕರು'

೨೦ ಡಿಸೆಂಬರ ೧೯೩೦

# ಮುನ್ನುಡಿ



## ಸಾಹಿತ್ಯದಲ್ಲಿ ಆಡುವ ಭಾಷೆ

**ಸಾ**ಹಿತ್ಯದಲ್ಲಿ ಆಡುವ ಭಾಷೆಯೇಕೆ ಹಣಿಕಿಹಾಕಬೇಕೆಂದು ಕೆಲವರಿಗೆ ಸೋಜಿಗವಾಗಬಹುದು. ಹಾಗೆಯೆ ಅಂಥವರು ಈ ಪುಸ್ತಕದಲ್ಲಿಯ ಭಾಷೆಯನ್ನೋದಿ, "ಇದೇನೋ ವಿಪರೀತವಾಗಿದೆ; 'ಹೊಸ ಹಾದಿ ಹೊಸಹಾದಿ' ಯೆಂದೆನ್ನುತ್ತ ಹೀಗೆ ಹುಚ್ಚು ಬಡೆಯುವದೇ ?" ಎಂದು ಮೂಗುಮುರಿಯಲೂ ಬಹುದು. ಅಂಥವರಿಗೆ ನಮ್ಮದೊಂದೇ ಉತ್ತರ: 'ಸಾಹಿತ್ಯದ ಬೇರು ಆಡುವ ಭಾಷೆಯಲ್ಲಿಯೇ ಬೆರೆತು ಕೊಂಡಿದೆ' ಎಂದು. ಈ ಮಾತನ್ನು ಪ್ರಪಂಚದ ಭಾಷಾಶಾಸ್ತ್ರಜ್ಞರೆಲ್ಲರೂ ಒಪ್ಪಿದ್ದಾರೆ.

ನಮ್ಮ ನಾಡಿನ ಸಾಹಿತ್ಯದಲ್ಲಿಯೂ. ಆಡುವ ಭಾಷೆಗೆ ಸ್ಥಾನವನ್ನು ಕಲ್ಪಿಸಿದ್ದಾರೆ. ಸಾಹಿತ್ಯದ ಪರಿಭಾಷೆಯ ಮೇರೆಗೆ ಬರೆಯುವ ಭಾಷೆಗೆ '**ಮಾರ್ಗ**'ವೆಂದೂ ಆಡುವ ಭಾಷೆಗೆ '**ದೇಶಿ**' ಎಂದೂ ಹೇಳುತ್ತಾರೆ. ಕವಿರಾಜಮಾರ್ಗದಲ್ಲಿ ನೃಪತುಂಗದೇವನು ಇದೇ ಮಾತನ್ನು ಪ್ರಸ್ತಾಪಿಸಿದ್ದಾನೆ. ಹಾಗೆಯೆ ಸಂಸ್ಕೃತ ನಾಟಕಗಳಲ್ಲಿ ಅರ್ಧಕ್ಕರ್ಧದಷ್ಟು ಆಡುವ ಭಾಷೆ ಬೆರೆತೇ ಇರುತ್ತದೆ.

ಭಾಷೆಯುಂ ರೂಢವಾಗಿಬಿಡುವದುಂಟು. ಆದುದರಿಂದ ಕಾಲ್ಪನಿಕ, ತಾತ್ವಿಕ, ಧಾರ್ಮಿಕ ಹಾಗೂ ಅದ್ಭುತರಮ್ಯವಾದ ಗ್ರಂಥಗಳ, ನಾಟಕ ಕಾದಂಬರಿಗಳ ಭಾಷೆಯು ರೂಢವಾದ ಪ್ರೌಢಭಾಷೆಯಾಗಿರುವದು. ಹೀಗೆ ಆದಾಗಲೆಲ್ಲ, ಹೊಸಗಾಲದ ಪರಿಸ್ಥಿತಿಗೆ ಹೊಂದುಗೂಡುವಂತೆ ಆ ಭಾಷೆಯನ್ನು ಮಾರ್ಪಡಿಸಬೇಕಾಗುವದು. ಈ ಕಾರ್ಯಕ್ಕೆ ಆಡುವ ಭಾಷೆಯ ನೆರವು ಅತ್ಯವಶ್ಯವೆ. ಈಚೀಚೆಗೆ ಹೊಸಗಾಲದ ಹಲವು ತರದ ಸೆಳತಗಳಿಗೆ ಸಿಕ್ಕು ನಮ್ಮ ಸಾಹಿತ್ಯವು ಹೆಚ್ಚು ವಾಸ್ತವ(Realistic)ವಾಗುತ್ತಲಿದೆ. ಆದರ್ಶಸಾಹಿತ್ಯದಿಂದ ವಾಸ್ತವಸಾಹಿತ್ಯದ ಕಡೆಗೆ ಹೊರಳಿದಂತೆ ಭಾಷೆಯೂ ಶೈಲಿಯೂ ಹೆಚ್ಚು ಹೆಚ್ಚು ವಾಸ್ತವವಾಗುವವು. ಇಂದು ವಾಸ್ತವ ವಿಷಯಗಳೇ ನಮ್ಮ ಸಾಹಿತ್ಯದಲ್ಲಿ ಹೆಚ್ಚಾಗಿ ತಲೆದೋರುತ್ತಿವೆ.

ಇದೀಗ ಕನ್ನಡನಾಡು ಇಂದಿನ ಹೊಸಗನ್ನಡವನ್ನು ಉಂಟು ಮಾಡುತ್ತಿದೆ. ಆದರ್ಶಸಾಹಿತ್ಯದ ಪಥದಲ್ಲಿ ಸಾಗಿದ ಬಾಣನ ಕಾದಂಬರಿಯ, ಗಳಗನಾಥ ಹಾಗು ಬಿ. ವೆಂಕಟಾಚಾರರ ಭಾಷೆಯು ಇಂದಿನ ಅಥವಾ ಇನ್ನು ಮುಂದೆ ಬರಲಿರುವ ಭಾಷೆಯ ತೂಕದಿಂದ ಒಂದು ಗುಂಜಿ ಹಳೆಯದೆಂದು ಎನ್ನಬಹುದು. ಹೋದ ದಶಮಾನದ ಸಾಹಿತ್ಯದಲ್ಲಿ ಇಂದಿನ ಆಡುವ ಭಾಷೆಗೆ ಅನುವಿರಲಿಲ್ಲ. ಎಂಥೆಂಥ ಸಾಮಾಜಿಕ ನಾಟಕ–ಕಾದಂಬರಿಗಳು ಕೂಡ ಈ ಮೊದಲು ರೂಢವಾದ ಪ್ರೌಢಗನ್ನಡದಲ್ಲಿಯೇ ಬರೆಯಲ್ಪಡುತ್ತಿದ್ದುವು. ಆದರೆ ಈಗ ಹತ್ತು ವರ್ಷಗಳಿಂದ ನಮ್ಮ ಸಾಹಿತ್ಯದ ಮೋರೆ ಚೇರೆ ನಿಟ್ಟಿಗೆ ತಿರಗಿದೆಯೆನ್ನಬೇಕು. ಇಂಗ್ಲೀಷು ಬೆಂಗಾಲೀ ಮರಾಠೀ ತೆಲಗು ಮುಂತಾದ ಸಾಹಿತ್ಯಗಳ ಹೊರಸೆಳತದಿಂದಲೂ, ನಮ್ಮ ಜೀವನ

ದಲ್ಲಿಯೇ ಉಂಟಾಗುತ್ತಿರುವ ರಾಷ್ಟ್ರೀಯ, ರಾಜಕೀಯ ಸಾಮಾಜಿಕ ಜಾಗೃತಿಯ ಒಳಸೆಳತದಿಂದಲೂ ನಮ್ಮ ಸಾಹಿತ್ಯವು ಇದೀಗ ಹೊಸ ದಾಗಿ ಹೊಳವುಗೊಳ್ಳುತ್ತಲಿದೆ. ಈ ಮಾರ್ಗದಲ್ಲಿ ಆಡುವ ಭಾಷೆಯು ನಮ್ಮ ಸಾಹಿತ್ಯಕ್ಕೆ ತುಂಬಾ ನೆರವು ಕೊಡಬೇಕಾಗಿದೆ. ಈ ರೀತಿ ನಮ್ಮ ಸಾಹಿತ್ಯವನ್ನು ಹೊಸ ಹಾದಿಗೆ ಒಯ್ಯುವದಕ್ಕೆ ಶ್ರೀ 'ಕೈಲಾಸಂ' ಮೊದಲಾದವರ ನಾಟಕಗಳು, 'ಶ್ರೀನಿವಾಸ' ಮುಂತಾದವರ ಕತೆಗಳು 'ಅಂಬಿಕಾತನಯದತ್ತ'ರಂಥವರ ಕವಿತೆಗಳು, ( ಹಾಗು ಈಚೀಚೆಗೆ ಸಾಹಿತ್ಯವಲ್ಲಿ ಸ್ಥಾನವನ್ನು ಪಡೆಯುಲು ಹವಣಿಸುವ ಹಳ್ಳಿಯ ಹಾಡು ಗಳು) ಮುಂದಾಳಾಗಿವೆಯೆನ್ನಬಹುದು. ಈ ಪುಸ್ತಕದಲ್ಲಿ ಕೊಟ್ಟ ಮೂರು ಹುಚ್ಚಾಟಗಳು ಈ ಹಿರಿಯರ ಹಾದಿಯನ್ನೇ ಹಿಡಿದು ಬರೆ ದಂತಹವು.

ನಾಟಕಗಳ, ಮುಖ್ಯತಃ ಸಾಮಾಜಿಕ ನಾಟಕಗಳ, ಅದರಲ್ಲಿಯೂ ಹುಚ್ಚಾಟಗಳ ಭಾಷೆಯು ಆಡುವ ಭಾಷೆಯಾಗಿರುವದೇ ಮೇಲು. ಸಾಹಿತ್ಯವು ನಾಡಿನ ನುಡಿಗನ್ನಡಿ. ಅದರಲ್ಲಿ ನಮ್ಮ ಇಂದಿನ ನಾಡು ಇಡಿಯಾಗಿ ಮೂಡುವಂತಿರಬೇಕು. ಈ ಮಾತಿಗೆ ಒಪ್ಪುವಂತೆ ಪ್ರಪಂ ಚದ ಅನೇಕ ಸಾಹಿತ್ಯಗಳಲ್ಲಿ ಈ ಬಗೆಯ ಮಾರ್ಪಾಟು ಉಂಟಾಗಿದೆ. ಇಂಗ್ಲೀಷು ಸಾಹಿತ್ಯದಲ್ಲಿ ಆಡುವ ಭಾಷೆಗೆ ಇಂಬುಗೊಟ್ಟವರಲ್ಲಿ ಟಾಮಸ್ ಹಾರ್ಡೀ ಮೊದಲಾದವರುಂಟು. ಇಂದಿನ ಭಾರತದಲ್ಲಿ ಹುಟ್ಟುತ್ತಿರುವ ಅನೇಕ ಹೊಸ ಸಾಹಿತ್ಯಗಳಲ್ಲಿ ಆಡುವ ಭಾಷೆಯು ಹೆಚ್ಚು ಹೆಚ್ಚಾಗಿ ಬೆರೆಯುತ್ತಿದೆ. ಶ್ರೀ ರವೀಂದ್ರನಾಥ ಠಾಕೂರರವರು ಬಂಗಾಲೀ ಭಾಷೆಯಲ್ಲಿ ಮಾಡಿದ ಮಹತ್ತರವಾದ

# ಟಿಪ್ಪಣಿ

[ ಧಾರವಾಡ ಪ್ರಾಂತದ ಹೊರಗಿನವರಿಗೆ ಈ ಪುಸ್ತಕದಲ್ಲಿಯ ಭಾಷೆಯ ಕೆಲವು ಶಬ್ದಗಳೂ ಪ್ರಯೋಗಗಳೂ ವಿಲಕ್ಷಣವಾಗಿ ತೋರಬಹುದು; ಮತ್ತೆ ಕೆಲವು ತಿಳಿಯಲಿಕ್ಕೂ ಇಲ್ಲ. ಅವನ್ನು ನಾವೇ ಕಂಡುಹಿಡಿಯುವದು ಬಗಿಯಾದ ಮಾತು. ಆದರೂ ಓದುಗರಿಗೆ ಸ್ವಲ್ಪಿಲ್ಲ ಸ್ವಲ್ಪ ಅನುಕೂಲವಾಗಲೆಂದು ಮಾದರಿಗಾಗಿ, ಹಾಗೆ ವೈಲಕ್ಷಣ್ಯಗಳೆಂದು ತೋರಬಹುದಾದ ಕೆಲವನ್ನು ಇಲ್ಲಿ ಕೊಟ್ಟಿದ್ದೇವೆ. ಓದುಗರು ಇವನ್ನು ತಿಳಿದುಕೊಂಡಿದ್ದರೆ ಒಳಿತು. ಉದಾ: ಇವಾ, ಅವಾ—ಇವನು, ಅವನು; ನದ್ಯಾಗ—ನದಿಯಲ್ಲಿ; ಭಾಳ—ಬಹಳ; ಸನೇಕ—ಸಮೀಪಕ್ಕೆ; ಅನಿಸಿಕೊಂಬವ್ರಿಗೆ—ಅನಿಸಿಕೊಳ್ಳುವವರಿಗೆ; ಹ್ಯಾಂಗರ—ಹೇಗಾದರೂ (ಅರ—ಆದರೂ); ಗಾಗರಿತಾರ—ಹಲಬುತ್ತಾರೆ; ಭ್ರಾಂಬರ—ಬ್ರಾಹ್ಮಣರ; ಮೂಲಿ—ಮೂಲೆ; ಎದಿ—ಎದೆ; ಹಾಂಗ—ಹಾಗೆ; ಹ್ಯಾಂಗ—ಹೇಗೆ; ಕಾಲಾಗ—ಕಾಲಲ್ಲಿ, ದೆಸೆಯಿಂದ; ಅನಕೋತ—ಅನ್ನುತ್ತ; ಉಳ್ಯಾಡಾಕ—ಉರುಳಾಡಲಿಕ್ಕೆ; ಹುಡುಗೀನ್ನ—ಹುಡುಗಿಯನ್ನು; ಸಂಗ್ತೀಲೆ—ಸಂಗಡ; ಹೋದ್ದು—ಹೋದದ್ದು; ಹತ್ತೇನು—ಹತ್ತಿತೇನು. ನಮ್ಮಾತು—ನಮ್ಮ ಮಾತು; ಕೊಳ್ಲಿಕ್ಕೆ—ಕೊಳ್ಳಲಿಕ್ಕೆ; ಅನಸೂತನಕಾ—ಎನ್ನಿಸುವ ತನಕ; ಹೊಂಟೆ—ಹೊರಟೆ; ಕೊಂಬೀಯಂತೆ—ಕೊಳ್ಳುವಿಯಂತೆ; ಕೊಳ್ಳಾಗ—ಕೊರಳಲ್ಲಿ; ಹತ್ತೀಲೆ—ಹತ್ತರ; ಅಂತೀನಿ—ಅನ್ನುತ್ತೇನೆ; ಹೋಗ್ತೇನಿ—ಹೋಗುತ್ತೇನೆ; ಹೊಳ್ಳ್ಯದರು—ಹೊರಳಿದರು; ಇತ್ಯಾದಿ. ಅಲ್ಲದೆ ಸರ್ವಸಾಮಾನ್ಯವಾಗಿ ಧಾರವಾಡ ಪ್ರಾಂತದಲ್ಲಿ 'ಎ' ಕಾರಗಳೆಲ್ಲ 'ಇ' ಕಾರಗಳಾಗುವದುಂಟು; (ಎದೆ—ಎದಿ; ತಲೆ—ತಲಿ; ಮನೆ—ಮನಿ). ವಾಡಿಕೆಯಂತೆ ಅನವಶ್ಯವಾದ ಸ್ಥಳದಲ್ಲಿ ದೀರ್ಘ (ೕ) ಬಂದಲ್ಲಿ, ಅದರ ಹಿಂದಿನ ಅಕ್ಷರವನ್ನು ಒತ್ತಿಯಾಗಲೀ, ಎಳೆದಾಗಲೀ ಉಚ್ಚರಿಸಬೇಕು. (ಇಲ್ಲೀಯಲ್ಲ ಕೂತೇದ; ಅದಕೇ.)]

---

# ಭೀಕರ ಪಿಡುಗು

" *They were not ashamed of living upon charity; but were ashamed of self-help.'*

'ತಿರಿದು ತಿಂನುವದಕ್ಕಿಂತ ಸ್ವಾವಲಂಬನವೇ ಇವರಿಗೆ ಹೇಸಿಗೆಯಾಗಿದೆ."

—ರವೀಂದ್ರನಾಥ

# ಪರಿವಿಡಿ

## ತಿರುಕರ ಪಿಡುಗು

### ೧ನೇ ನೋಟ: ಮೊದಲ ಮಾತು

ಒಬ್ಬ:— (ತೆರೆಯೊಳಗುತ್ತಲೆ ಬಂದು) ಕೇಳ್ರಿ, ಕೇಳ್ರಿ, ಸ್ವಲ್ಪ ಕಿವಿ ಗೊಟ್ಟು ಕೇಳ್ರಿ. ಮುಂಡಾಸ ಗಿಂಡಾಸ ಹಾಕ್ಕೊಂಡು ಬಂದಿಲ್ಲ; ಇವಾ ಯಾರಪಾ ಅಂದೀರಿ! ನಾನು ಡ್ರಾಮ್ಯಾಟಿಕ್ ಸೆಕ್ರೆಟರಿ–ಗ್ಯಾದರಿಂಗ ದೊಳಗಿನ ನಾಟಕ ಡಿಪಾರ್ಟಮೆಂಟಿನ್ಯಾಗ ಸೂತ್ರಧಾರ ಇದ್ದಾಂಗ. ನಾವು...ಇಂದೇ...ಒಂದು ಹುಚ್ಚಾಟಾ–ಫಾರ್ಸ...ಆಡಿ ತೋರಿಸು ವವರಿದ್ದೇವಿ...ಹುಚ್ಚಾಟಾನೇ ಅನ್ನಿರಿ: ಯಾಕ ಅಂದ್ರ...ನಿಮಗ ಗೊತ್ತಿಲ್ಲದ್ದೇನದ! ಗ್ಯಾದರಿಂಗಿನ ನಾಟಕದಾಗ ಪಾರ್ಟು ತಗೊಳ್ಳಿಕ್ಕೆ ನಾಮುಂದ್ ನೀಮುಂದ್ ಅಂತ ಮಂದಿ ಬಂದ್ರೂ ಪೂರಾ ಮಾತು ಪಾಠಮಾಡಿದಾವ ಯಾವನು ಇರೂದುಲ್ಲ. ಪ್ರಾಮ್ಟಿಂಗು ಭಾಳ ಮಾಡಬೇಕಾಗತದ. ನಾಟಕಾ ನೋಡವ್ರಿಗೆ ಅನಸ್ತದ...ಪಡದೇದ ಮುಂದ ಪ್ರಾಮ್ಟರ್ಸ ನಿಂತಾರೇ...ಪಾತ್ರ ಮಾತ್ರ ಪಡದೇದ ಹಿಂದಿಂದ ಮಾತಾಡ್ತಾವ...ಅಂತ. ಹೀಂಗ ಆಗೋದೇನೋ ಖರೇ...–ಆದ್ರ, ಪ್ರಾಮ್ಟ ಮಾಡವ್ರಾರೇ ಎಷ್ಟು ಮಾಡ್ಯಾರು ಹೇಳ್ರಿ? ಅವರಿಗೇನು ಹತ್ತು ಬಾಯಿ ಇರತಾವ? ಅಂತ ಈ ಸರತೇಕ್ಕ ನಾಯೇನು ಒಂದು

ಹಿಕ್ಮತ್ ಮಾಡ್ದೆ ಅಂದ್ರ, ಒಂದೇ ಸೋಗು ಇಟ್ಟು ಬಿಟ್ಟೆ. ಉಳಿದವರೆಲ್ಲಾ ಹಿಂದ ನಿಂತು ಪ್ರಾವ್‌ಟಿಂಗ ಮಾಡಿಧಾಂಗಾತೂ, ಪಾತ್ರದ ಕೆಲ್ಸಾಮಾಡಿಧಾಂಗಾತೂ, ಅಂತ ಉಳಿದೆಲ್ಲಾ ಸೋಗು ಹಿಂದ ಇಟ್ಟೇನಿ; ಮತ್ತೇನು ಹೆಚ್ಚುಕಡಿಮಿ ಇಲ್ಲಾ. ಒಂದೇ...ಸೋಗು ಅಂತ ಘಾಬ್ರಿ ಆಗ ಬ್ಯಾಡ್ರಿ.. ಒಂದರಾಗೇ...ನೂರೊಂದವೇ ಆತು... ಗುಡ್ ನಾಯಿಟ್–ಅಂದ್ರ ಆಟ ಸುರುವು ಆತು ಅಂತಂಧಾಂಗ...ಹೋಗಿ ಬರ್ತೇನಿ. (ಹೋಗುವನು; ತೆರೆಯೇಳುವದು)

## ೨ನೇ ನೋಟ: ತಿರುಕರ ತಂಡ

[ಒಂದು ಬಂಗಲೆಯುಲ್ಲಿಯ ಕೋಣೆ. ಒಂದು ಮಗ್ಗುಲಿಗೆ ಒಂದೆರಡು ಖುರ್ಚಿ; ಮೇಜಿನ ಮೇಲೆ ಟೀ- ಕಪ್ಪು-ಬಸಿ ; ಒಂದು ಗಡಿಯಾರ ; ಅದರೊತ್ತಿಗೆ ಹಜಾಮತೀ ಸಾಮಾನು ; ಇದುರಿಗೆ ಒಂದು ಕನ್ನಡಿ; ಆ ಕಡೆ ಒಂದು ಫೋನೊ, ಬದಿಯುಲ್ಲಿ ಒಂದುನಾಲ್ಕು ಪುಸ್ತಕ. ಈ ಕಡೆ, ಒಂದು ಕಲ್ಫು ; ಅದರಲ್ಲಿ ಕಟ್ಲು, ಸ್ಟೊ, ಕೋಸಕ, ಸಾಬಾಣದ ಡಬ್ಬಿ; ರದಫೇನ್ ಡೆಂಟಲ್‌ಕ್ರೀಮು. ಕುಂತಲರಂಜನಿ ತೈಲ. ಹಿಮಾನಿಯಾ ಸ್ನೋ. ಹೇರ ಪೂಮ್ಯಾಡೋದ ಡಬ್ಬಿ ಮೊದಲಾದವುಗಳು. ಬದಿಯುಲ್ಲಿ ಒಂದು ಹಾರ್ಮೋನಿಯಂ; ಇತ್ತ ಬಾಗಿಲ ಬದಿಯುಲ್ಲಿ ಒಂದೆರಡು ಜೋಡಿ ಕಾಲ್ಮರಿ; ಒಂದು ಜೋಡು ಸ್ಲಿಪರ್ಸು; ಒಂದು ಜೋಡಿ ಶೂ. ಇನ್ನೊಂದು ಜೋಡಿ ಕೆಸ್ಸ ಕಾನ್‌ವ್ಹಾಸ ಶೂ. ಗೋಡೆಗೆ ಬಾಡ್ಮಿಂಟನ್ ರ್‍ಯಾಕೆಟ್ಟು, ಟೆನಿಸ ರ್‍ಯಾಕೆಟ್ಟು ಇವೆ; ನೆಲದ ಮೇಲೆ ಒಂದೆರಡು ಚೆಂಡುಗಳು ಉರಳಾಡುತ್ತಿವೆ. ಇತ್ತ ಕಡೆ ಒಂದು ಆರ್ಮಚೇರು.]

**ಮಿ॥ ನಾಯಕರು:—** (ತೆರೆಯೆದ್ದ ಮೇಲೆ, ಪ್ರವೇಶಿಸಿ, ಗೋಡೆಗೆ ಅಂಟಿಸಿದ ಟಾಯಿಮ್‌ಟೇಬಲ್ಲನ್ನು ಗಟ್ಟಿಯಾಗಿ ಓದುತ್ತ ನಿಲ್ಲುವನು.)

ಸೇವನ್ನೋಕ್ಲಾಕ್ (ಏಳಕ್ಕೆ)=ಏಳುವದು; ಹಲ್ಲು ತಿಕ್ಕುವದು.
ಸೇವನ್‌ಫಿಫ್ಟೀನ್ (ಏಳೂಕಾಲು)=ಚಹಾ–ಕೈಕಾಲೂ
ಸೇವನ್ ಥರ್ಟಿ (ಏಳೂವರೀ)=ಹಜಾಮತೀ
ಸೇವನ್ ಫಾರ್ಟಿಫೈವ್ (ಏಳುಮುಕ್ಕಾಲು)=ಶೇರ್ ಡ್ರೆಸಿಂಗೂ
ಏಟ್ (ಎಂಟಕ್ಕೆ)=ಫೋನೋ
ಏಟ್ ಥರ್ಟಿ (ಎಂಟೂವರೀ)=ಕಾದಂಬರೀ
ನಾಯಿನ್ (ಒಂಭತ್ತು)=ನಾಟಕ ಓದುವದು
ನಾಯಿನ್ ಥರ್ಟಿ (ಒಂಭತ್ತುವರೀ)=ಹಾಡು–ಗಾಯನ
ಟೆನ್ (ಹತ್ತಕ್ಕೆ)=ಡ್ರೆಸ್ಸಿಂಗು.
ಟೆನ್ ಥರ್ಟಿ (ಹತ್ತೂವರೀ)=ಊಟಾ....................ಅಂತೂ

ಇದು ಮಾರ್ನಿಂಗ ಟಾಯಿಮಟೇಬಲ್ಲು. ಆತು. ಈಗ ಯೇಳ ಘಂಟೇಕ್ಕೇನು ?–ಹಲ್ಲು ತಿಕ್ಕೊಂಬೂದು–ತಿಕ್ಕೊಂಡೆ. ಆಗಲಿ ಸಧ್ಯಾ–ಎಲ್ಲಾ ಖಿಡಕೀ ಬಾಗಲಾ ತೆರೆದಿಡೋಣ. ಮೊದಲೀ ಪ್ಲೇಗಿನ ದಿವಸ; ನಾಯಿಲ್ಲೆ ಬರದಕ್ಕಿಂತಾ ಮುಂಚೆ ಎಷ್ಟು ದಿವಸ ಈ ಬಂಗ್ಲೇಕ್ಕ ಕೀಲಿ ಬಡದಿದ್ದರೋ ಏನು ಮಣ್ಣೋ ! ಯಾರು ಬಲ್ಲರು ! ಒಳಗಿದ್ದ ಚಿಕ್ಕಾಡುಗಿಕ್ಕಾಡು ಎಲ್ಲಾ ಹೊರಗ ಹೋಗಿ, ಫ್ರೆಶ್ ಲಾಯಿಟೂ ಏರೂ–ಗಾಳೀ ಬೆಳಕು—ತುಂಬಿ ಬಿಡ್ಲಿ. ನಮ್ಮೂರಿನ ಪ್ಲೇಗ್ ಜರ್ಮ್ಸ್ ಇಲ್ಲೂ ಹಾರಿ ಬಂದ್ರಗಿಂದ್ರ ಹ್ಯಾಂಗ ಮತ್ತೇ—ಜಗದೀಶಾ ! ಶಿವನೆ ಕಾಯಬೇಕು ಬಾಲಶಾ !! (ಓಡುವವನು) ನಾವೊಬ್ಬರು ದೈವುಳ್ಳವರು, ಊರು ಬಿಡತೇವಿ. ಇನ್ನೂ ನಾಲ್ಕೊಪ್ಪತ್ತು ನಾವು ಬದುಕಿದ್ರ ನಮಗ ತಿನ್ನಲಿಕ್ಕೆ ಅದೇ ಅನ್ರಿ. ಬಡಸೂಳೇಮಕ್ಕಳೂ ಭಡಾಭಡಾ ಊರ ಬಿಡಬೇಕೇ ! ಸಾಯೋ ಚಿಂತಿ ಇವರಿಗ್ಯಾಕೇ ! ಇವರಿಗೆ ಇರೋ

ಚಿಂತಿ ಇರಬೇಕು ! ಥಣ್ಣಾಗ ಪ್ಲೇಗಿಲೆ ಯಾಕ ಸತ್ತಾರು ಈ ಮಕ್ಕಳು! ಹೊಟ್ಟಿಗಿಲ್ಲದೇ ಹಸಿವಿ ಹಸಿವೀ ಅಂದು ಕಂಗಾಲಾಗಿ ಬೆಂಕಿ ಬಿದ್ದು ಸಾಯಬೇಕು ಅಂತ ಇವರ ಹಣೇಬರಹದಾಗ ಬರೆದಿರಬೇಕು. ಬಡವರೇನು?—ಇದ್ದೂ ಸತ್ತಹಾಂಗ! ಇವರೂ ಪ್ಲೇಗಿನ ಊರು ಬಿಟ್ಟು ಬಂದ್ರ ಏನು ಮಾಡ್ಯಾವು ಪ್ಲೇಗಿನ ಹುಳಾ! ಹೊಟ್ಟೆಗಿಲ್ಲದ್ದಕ್ಕ ಮುಂದಿದ್ದಲ್ಲೇ ಬರತಾವ. ನಾವೇ— ನಮ್ಮ ಎಚ್ಚರದಾಗಿರಬೇಕು, ಆತು. ಈಗೇನು, ಏಳೂಕಾಲು—— ( ಟಾಯಿಮ್ ಟೇಬಲ್ ನೋಡಿ ) ಚಹಾ - ಮಾಡೂಣೇ [ಮಾಡಹತ್ತುವನು; ಅಷ್ಟರಲ್ಲಿ ಒಬ್ಬ ಬುಡಬುಡಿಕಿಯು 'ಬಲು ಭಾಗ್ಯ ಭಾಗ್ಯ ಬರತೈತಣ್ಣಾ!! ' ಎಂದು ಹಾಡುತ್ತ ಬಾರಿಸುತ್ತ ಬರುವನು.]

ಏ! ಭಾಗ್ಯಾ ಭಾಗ್ಯಾ ಅಂತ ಬಾಯ್ಬಿಡೋ, ಭಾಗ್ಯದ ಬಾಯಿ ಬಡಿಯೋ ಬಡ ಸೂಳೇಮಗನೇ!! ಇದೇನು ಕಚೇರಿ—ಕಟ್ಟೇಂತ ಟಾಯಿಮುಶೀರ, ಏಳ ಘಂಟೆಕ್ಕ ಬಂದ್ಯಾ ? ಒಳ್ಳೊಳ್ಳೇ ಆಫೀಸರ್‍ರು ಹೊತ್ತಿಗೆ ಹೋಗೂದುಲ್ಲ ಕಚೇರಿಗೆ! ಈ ಮಗಾ ಘಡ್ಯಾಳ ಇಟ್ಟವನ್ಹಾಂಗ —— ಹೊತ್ತಿಗೆ ಬರದಿದ್ರ ನಾವೆಲ್ಲಿ ಬೈತೀವೋ ಅಂಬಾವರ್‍ಹಾಂಗ ಬಂದಾನ! ಇವನ ಮುಂಡಾಸಾ ನೋಡ್ರಿ; ಮುದ್ರೀ ನೋಡ್ರಿ; ಗರೀ ಏನ ಚುಚ್ಚಿಕೊಂಡಾನ; ಪುಚ್ಚಾ ಏನ ಹಚ್ಚಿಕೊಂಡಾನ! ಬಣ್ಣದ ಸಂತೀ ನೆರೆಸಿಧಾಂಗ, ಎಷ್ಟು ಬಣ್ಣದ ಅರಿವಿ ಸುತ್ತಿಕೊಂಡು ಬಂದಾನ. ಸೆಕೆಂಡ ಹ್ಯಾಂಡ ಅರಿವಿ ಕಂಪನಿಯುವರು ನಿನಗ ಸ್ಯಾಂಪಲ್ ಕೊಟ್ಟು ಟೂರಿಂಗ ಎಡ್ವ್ಹರಟಾಯಿಜಿಂಗ ಎಜಂಟ ಅಂತ ಕಳಿಸ್ಯಾರೋ ಏನು ( ಸ್ಟೋವಿನಿಂದ ಕೆಟ್ಲ ಇಳಿಸುವನು.) ಹೂಂ, ಸಾಕು ಮಾಡು; ನಿನ್ನ ಬುಡಬುಡಕಿ ಬ್ಯಾಡಾ, ಬಡಬಡಿಕಿ ಬ್ಯಾಡಾ. ಫೋನೋಗ್ರಾಫ ರೆಕಾರ್ಡ್ಸು ಮಾಡಲಿಕ್ಕೆ ಇವರ ಗಂಟ್ಲದ

ಎಲುಬು ಉಪಯೋಗಿಸಿದ್ರ ನೆಟ್ಟಗಾಗೂಹಾಂಗ ಕಾಣ್ತದ. ಮಕ್ಕಳು ಹೇಳಿದ್ದ ಹೇಳ್ತಾರೇ; ಹಾಡಿದ್ದ ಹಾಡ್ತಾರ. ಮಿಕಿಮಿಕಿ ಮಾರೀ ಏನ್ ನೋಡ್ತೀ. ಇವಾ ಎಲ್ಲಿಯಾವ ಬಂದ ನನಕಿಂತ ಹೆಚ್ಚಿನಾವಾ ಅಂತೀ ಏನು? ಅಬ್ಬಬ್ಬಾ ನನ್ನ ಬಾಯ್ಗೇನ್ ನೀ ಹತ್ತೀ; ಹೋಗು! ನಿನಗ ಬೇಕು ಜೋಳಾ; ನಾವು ಗೋದೀ ಕೊಳು ತಿಂಬವ್ರು! ರೊಕ್ಕಾ ಅಂದ್ಯಾ ? ಎಲ್ಲಾ ಬ್ಯಾಂಕಿನಾಗ ಅವೇ. ಹರಕ ಅರಿಬಿ?? ನಾವು ಅವನ್ನ ಕಟ್ಟಕೊಂಡು ಊರೂರು ತಿರುಗೋಣೀ! ಹೂಂ. ಹೊರಡು!!! (ಚಹಾ ಕುಡಿಯುವ ಉದ್ಯಮಕ್ಕೆ ಆರಂಭಿಸುವನು.)

[ಸ್ವಲ್ಪ ಹೊತ್ತಿನಲ್ಲಿ ಒಬ್ಬ ಆಚಾರ್ಯರು 'ಲಕ್ಷ್ಮೀವೆಂಕಟೇಶಾಯನಮಃ' ಎನ್ನುತ್ತ ಬಾಗಿಲಲ್ಲಿ ಬರುವರು. ನಾಯಕರು ಹಜಾಮತಿ ಆರಂಭಿಸಿರುವರು]

ಬರಬೇಕು, ಬರಬೇಕು ಮಹಾಸ್ವಾಮಿ! ತಮ್ಮ ಸಲುವಾಗಿಯೇ ಭತ್ತಾ ಕುಟ್ಟಿ ಅಕ್ಕೀ ಬೇರೆ ಮಾಡಿ ಗೊಳಲೀ ತೆಗೆದು ಇಟ್ಟೀವಿ; ಬರಬೇಕು. ಏನ್ರೀ ದಿನಾ ಬೆಳಗಾದ್ರ ಆ ಲಕ್ಷ್ಮೀವೆಂಕಟೇಶನ ಹೆಸರ್ಲೆ ಗೋಪಾಳಾ ಬೇಡಲಿಕ್ಕೆ ನಾಚಿಕಿ ಬರೂದುಲ್ಲ ? ಅಥವಾ ನಾಚಿಕಿ ಯಾತರದೂ ಅನ್ರಿ. ಲಕ್ಷ್ಮೀನ್ನೇ ಹತ್ತರ ಇಟ್ಟುಕೊಂಡು ಬಂದವರಿದುರಿಗೆ ಕೈ ಒಡ್ಡೋ ತಿರುಪತಿ ವೆಂಕಟೇಶಗ ನಾಚಿಗಿದ್ರ ನಿಮಗಿರಬೇಕು. ತಿರುಪತಿ ನಿಮ್ಮ ಸ್ವರ್ಗ; ಗೋಪಾಲ ಬುಟ್ಟಿ ನಿಮ್ಮ ಭಾಂಡಾರ; ಒಡ್ಡಿದ ಕೈ ನಿಮ್ಮ ಪೌರುಷ ಪ್ರಯತ್ನ; ಲಕ್ಷ್ಮೀ ವೆಂಕಟೇಶಾಯನಮಃ ಇದು ಮಹಾಮಂತ್ರ — (ಕಣ್ಣುಸಿದು) ಏನು ಅಂಗಾರಾ ! ಏನು ಅಕ್ಷಂತೀ ! ನಿದ್ದ್ಯಾಗಿಂದೆದ್ದರ ನದ್ಯಾಗ ಮುಳುಗಿ ಎದ್ದಾಂಗ ಅಂತ ತಿಳಕೊಂಡೀರೇನು! ಶಾಲಿನ ಸಡಗರ ಯಾತಕ್ಕ ಬೇಕಾಗಿತ್ತು !! ಏನು ನೋಡ್ತೀರಿ ? ಬಾಯ್ಗೆ ಏನು ಒಟಗುಡತೀರಿ–

ನಿಮ್ಮ ಶಾಪಾ ಕೋಪಾ ನಡೀತಿದ್ರ ನಿಮ್ಮ ಮನೀ ತನಕಾ ಬಂದು ನಾವ ಕೊಡೋದು ಕೊಟ್ಟು ಸಾಷ್ಟಾಂಗ ಹಾಕಿ ಹೋಗ್ತಿದ್ವಿ. ಇಲ್ಲೆ ನಿಮ್ಮ ಮಾತ್ರ ನಡ್ಯೂದಿಲ್ಲ. ಒಳ್ಳೇ ಮಾತಲೆ ಮುಂದ ಹೋಗ್ರಿ. ನಿಮ್ಮ ಮಾನಾ ನೀವ ಉಳಿಸಿಕೊಂಡು ಹೋಗ್ರಿ ಮುನ್ನೋಡಿ. ಹೂಂ ಹೀಂಗ; ಹೋಗ್ಹೋಗ್ರಿ. (ಹೇಳಕ ಪ್ರಸಂಗದ ಗಡಿಬಿಡಿ)

( ಆವೇಳೆಗೆ ಒಬ್ಬ ಬ್ರಾಹ್ಮಣ ವಿಧವೆ;—ಮುದಿಕಿ—ಗೋವಿಂದಾ ಹಾಕ್ರಪ್ಪಾ, ಎನ್ನುತ್ತ ಕುಕ್ಷಿವೃತ್ತಿಗಾಗಿ ಬರುವಳು.)

ಬರ್ರಿ, ಬರ್ರಿ ಗಂಗಾಬಾಯ್ರ, ಭಾಗೀರಥಿಬಾಯ್ರ, ಗಂಗಾಭಾಗೀ ರಥಿಬಾಯ್ರ, ಬರ್ರಿ, ಆಗ್ಲೇ ಹೊದಾವ್ರ ನಿಮ್ಮ?...ಓಹೋ, ನೀವು ಸನ್ಯಾಸಿಗಳು; ನಿಮಗ ಏನು ಕೇಳೋ ಹಾಂಗಿಲ್ಲ. ಮುಂಜಾನೆ ಎದ್ದು ಕೈಯಾಗ ತಂಬ್ಗಿ ತಗೊಂಡಾವ್ರ ಇತ್ಲಾಗ ಹಿಂಗ ಬಂದ್ರೇನು? ಏನ್ರಿ ಹೀಂಗ ಜೀವಾ ಇಟ್ಟುಕೊಂಬೋದರಕಿಂತ ನಿಮ್ಮ ಯಜಮಾನ್ರುಕೂಡ ಸುಟಕೊಂಡ ಸತ್ತಿದ್ರ ನಿಮಗೆಷ್ಟು ಪುಣ್ಯಾ ಬರತಿತ್ತು! ಮಂದಿಗೆಷ್ಟು ಛಲೊ ಆಗ್ತಿತ್ತು!...ಸತಿ ನಿಲ್ಲಿಸಿ ಸರಕಾರಾ ಭಾಳ ತಪ್ಪ ಮಾಡ್ತು. ತಿರುಕೊಳ್ಳೋರ ಸಂಖ್ಯಾ ಹೆಚ್ಚಾಗ್ಯದಂತ ಮ್ಯಾಲೆ ಬೊಬ್ಬೀ ಹೊಡೀ ತಾರ. ಮಾಡಿದವ್ರ ಉಣತಾರ ಮಣಿಯಂಥ ಕಡಬು....ಈ ಶುಕ್ಲೂರ್ತಿ ಬೇಡೋದರಕಿಂತ ಸರಕಾರದ ಮ್ಯಾಲೆ ಫೋಟಗೆ ದಾವೆ ಮಾಡ್ರಿ; ದಾವೇ ಇಲ್ಲದ್ರ, ಸತೀ ಹೋಗಲಿಕ್ಕೆ ಪರವಾನಗಿ ಕೊಡ್ರಿ, ಅಂತ ಅನ್ರಿ. ನಮ್ಮದೂರ್ಗೆ ಅತ್ತೇನು ಮಾಡ್ತೀರಿ? ನಿಮ್ಮಗೋಣ ಸರಕಾರದ ಕಿವಿಗೆ ಬೀಳ್ಲಿ. ಧರ್ಮಾ ಕರ್ಮಾ ಅಂತ ನಾವು ಬಿಕ್ಷಾ ಹಾಕೋದು! ಹಿಂದುಸ್ತಾನದಾಗ ಎಲ್ಲಾ ಛಲೋ ಅದೇ; ಬಡ್ತನಾ, ಬಿಕ್ಷುಕರ ಭವಣೆ, ಏನಿಲ್ಲಾ ಅಂತ ಸರಕಾರ ತಿಳಕೊಂ

ಜೋದು !! ಅದೇನು ಬ್ಯಾಡಾ. ನೆಟ್ಟಗ ಕಚೇರಿ ಕಡಿಗೆ ಹೋಗ್ರಿ; ಅಲ್ಲಿ ಧನೀ ತಗದು ಅಳ್ರಿ. ಇಲ್ಲಾ, ಅಲ್ಲೇ ತಲೀ ವಡಕೊಂಡು ಸಾಯ್ರಿ. ನಿಮಗೇನೂ ಈ ಮನ್ಯಾಗ ಸಿಗಲಿಕ್ಕಿಲ್ಲ. ನಡೀರಿ....ಇಟೇಜ ಏಟ್– (ಟೈಮಟೇಬಲ್ ನೋಡಿ) ಫೋನೋ— (ಫೋನೋ ಹಚ್ಚುವನು.)

[ಕೂಡಲೆ ಒಬ್ಬ ದಾಸಯ್ಯನು 'ಗೋವಿಂದಾ, ಗೋವಿಂದಾ' ಎನ್ನುತ್ತ ಶಂಖ ವನ್ನೂದುತ್ತ ಬರುವನು.]

ಬಂದನಪಾ ಈ ಮಗಾ; ಏನ್ ಹೊತ್ತು ಸಾಧಿಸಿದ್ಯೋ— (ಫೋನೋ ನಿಲ್ಲಿಸಿ) ಏ, ಹೊಲ್ಯಾ ಗೋವಿಂದಾ, ಶಂಖಾ ಜೊಡೀ ಬ್ಯಾಡಾ! ಸುಣ್ಣಾಬಣ್ಣಾ ಹಚಿಕೊಂಡು ಬಂದಕೂಡ್ಲೆ ಧೊಡ್ಡ ದಾಸಾಗಿ ಬಿಟ್ಟೇನು? ನಮ್ಮ ಮನೀ ಎದುರ್ಗೆ ಶಂಖಾ ಹೊಡೀಬ್ಯಾಡಾ. ಅಗಸೀ ಇದುರ್ಗೆ ಹೊಡಿ. ನಿನಗ ಹೊಟ್ಟೆಗಿಲ್ಲದಿದ್ರ ಮಂದಿಗೆ ಕಾಡಬೇಕು ಅಂತ ಹೇಳ್ಯಾನೇನು ನಿಮ್ಮ ಗುರು ಕನಕದಾಸಾ? ಹಾಡಿದ್ದ ಹಾಡೋ ಕಿಸಬಾಯ್ದಾಸಾ ಅಂತಾರಲ್ಲ! ಒಂದ ಹೊಸಾ ಹಾಡಿಲ್ಲಾ; ಹೊಸಾ ರಾಗಿಲ್ಲಾ! ಇವರ ಅಜ್ಜನ ಅಜ್ಜ ಕಲ್ತಿದ್ದು ಅದೇ ಹಾಡು; ಇವನ ಮೊಮ್ಮಗನ ಮೊಮ್ಮಗಾ ಹಾಡೋದೂ ಅದೇ ಹಾಡು. ನಮ್ಮ ಮೆಟ್ಟುಗಟ್ಟೆ ಮುಟ್ಟೆ ಹೋದೀ; ಅದಕಿನ್ನ ನೀರು ದಂಡ. ದೂರ ನಿಂತ್ರ ನಿಮ್ಮ ಶಂಖ ಕೇಳಿಸಲಿಕ್ಕಿಲ್ಲ ಅಂತ ಕಿವ್ಯಾಗೇ ಬಂದ ಊದತೀರೇನು? ಏನು ಒಬ್ಬೊಬ್ಬರ ಜ್ಯಾತಿ ನೋಡ್ರಿ! ಬ್ರಾಹ್ಮಣ್ರು, ಬ್ರಾಹ್ಮಣ್ರು ಅಂತ ಬಿಕ್ಷಾ ಬೇಡತಾರ; ಹೊಲ್ಯಾರು, ಹೊಲ್ಯಾರು ಅಂತ ಬೇಡ್ತಾರ!...ಏನು ದೀಪಕ್ಕ ಎಣ್ಣೀ ಹಾಕಲ್ಯಾ? ನಮ್ಮಲ್ಲಿ ಗ್ಯಾಸ ಹಚ್ಚತಿರ್ತೇವಿ, ಎಣ್ಣಿ ಇಲ್ಲಾ...ಏನು ಒಳ್ಳೇಎಣ್ಣ್ಯಾ? ಚಿಮಣೀ ಎಣ್ಣಿ, ಎಳ್ಳೆಣ್ಣೀ, ಒಳ್ಳೇ ಎಣ್ಣಿ, ಖೊಬ್ಬರಿ ಎಣ್ಣಿ ಅಂತ

ಎಲ್ಲಾ ಎಣ್ಣೀ ಹೆಸರೂ ಅದರ ಉಪಯೋಗಾ ಪಾಠ ಮಾಡಿ ಇಡ್ತೇನು. ಎಣ್ಣಿ ಇಲ್ಲಾ ಅಂತ ಹೇಳಿತು, ಆತು. ಅಷ್ಟರ ಮ್ಯಾಲಿಂದ ತಿಳಕೊಬೇಕು. ಗೋವಿಂದಾ ಗೋೀೀ ವಿಂ ದಾ— ಹೊರಡು ! ಎಂಟೂವರೀ ಆತು. ನಾವು ನಾವೆಲ್ಲ ಓದಬೇಕು.

(ಓದುತ್ತ ಕುಳಿತ ತುಸು ಹೊತ್ತಿನಲ್ಲಿ 'ಯಾ ಕುಲದೇ ಜೋಗವ್ವಾ' ಎನ್ನುತ್ತ ಜೋಗವ್ವನೊಬ್ಬಳು ಬಾಗಿಲೆಡೆಗೆ ಬರುವಳು.)

ಒಂದ ನಾಕಸಾಲು ಓದೋದ್ರಾಗೇ ಹಾಜರ ಆಗ್ಯಾಳಲ್ಲ ಈ ಚಿರ ಮುತ್ತೈದಿ !—(ಪುಸ್ತಕ ಮುಚ್ಚಿ) ಏನು ಯಾಕುಲದೇ !—ಯಾ ಕುಲ್ದಾಕಿ ನೀನು ? ತಿರಿಕಿ ಆಗ್ಯೂ ಮುರಕ ಹೋಗಿಲ್ಲಾ ಇನ್ನೂ ! ಹಣೀ ಭಂಡಾರಾ ನೋಡ್ರಿ! ತಂಬುಲದ ತುಟೀ ನೋಡ್ರಿ ! ಕುಬಸಾ ನೋಡ್ರಿ ! ಸೀರಿ ನೀರಿಗೀ ನೋಡ್ರಿ !!! ಹುಬ್ಬೇನು ಹಾರಸ್ತೀ ಹುಬ್ಬ ? ನೀವೇನು ತಿರಕೊಳ್ಳಲಿಕ್ಕೆ ಬರತೀರ್‍ಯೋ...ಮತ್ಯಾತ ಕ್ಯಾರೂ ಬರತೀರೋ! ಸೂಳಿ ಮುಪ್ಪಾಗಿ ಜೋಗತಿ ಆಗ್ತಾಳ ಅಂತಾರ; ಮೆಣಸು ಮುಪ್ಪಾದರೂ ಜೋಳಾದಾವೇನು?...ತಲೀ ಮ್ಯಾಲೊಂದು ಹಡಲಗಿ; ಕೊಳ್ಳಾಗ ಎಲ್ಲವ್ವನ ತಾಳಿ; ಕಯ್ಯಾಗ ತಂಬಟ. ಹೊರ ಟರು ಊರೆಲ್ಲಾ ಮೋಜು ಮಾಡ್ಕೋತ, ನೋಡ್ಕೋತ;...... ಭಂಡಾರಾ ಮಂತ್ರಿಸಿಕೊಂಡು ಬಂದಿರತಾರೋ ಏನೋ ! ಇಲ್ಲದಿದ್ದರ ಇವರ ಹೊಟ್ಟೀ ತುಂಬತಿತ್ತ ಹ್ಯಾಂಗ ?... ಇದು ತಿರಕೊಂಡ ತಿಂದ ಮೈಯ್ಯೀ ? ಹರೇದವರ್‍ನ ಮುರಕೊಂಡ ತಿಂದ ಮೈ !...ಏನೂ ನೀಡೂ ದುಲ್ಲ ಹೋಗು. ಕಾಯ್ದೇದ ಬಲೀ ತಪ್ಪಿಸಿಕೊಳ್ಳಲಿಕ್ಕೆ ತಿರ ಕೊಂಬೋ ಕಾಯ್ದೆ ನಡ್ಸಿದಾವ್ರು, ಸೆನ್ನಸದಾಗ ಹ್ಯಾಂಗ ಪಾಲಾ ಗ್ಯಾರೋ !... ಮತ್ತೇನು ಅವರಿಗೂ ತನ್ನ ಭಂಡಾರಾ ಬಡಿಯೋದು,

ಹುಬ್ಬುಹಾರ್‍ಸೋದು ಛೀ, ಛೀ, ಎಲ್ಲಾ ಕೆಟ್ಟುಹೋಗ್ಯದ ಸಮಾಜಾ-ಇರಲಿ, ಹಾಳಾಗಿ ಹೋಗು ಅತ್ಲಾಗ. ... ಒಂದ್ಯಾವದರ ನಾಟಕಾ ಓದೋಣು. ಒಂಬತ್ತೊಡೀತು.

[ಅವಳು ಹೋದಮೇಲೆ ಒಬ್ಬ ದಾಸರು ತಂಬೂರಿಯೊಡನೆ 'ಏನು ಬೇಡಲಿ ನಿನ್ನ ಬಳಿಗೆ ಬಂದೂ' ಎಂದು ಹಾಡುತ್ತ ಬಾಗಿಲಬಳಿಗೆ ಬರುವರು. ಪುಸ್ತಕವನ್ನು ಸಿಟ್ಟಿನಿಂದ ಎಸೆದು ]

ಆಹಹಾ (ಅಣಗಿಸುತ್ತ) 'ಏನುಬೇಡಲಿ ನಿನ್ನಬಳಿಗೆ ಬಂದೂ' ಬೇಡಿದ್ರ ಕೊಡೋ ಮಗಾ ಯಾವಾ? ನೀವೆಲ್ಲಾ ಬೇಡೀರಿ. ಆಹಾ ಏನು ಸಂಗೀತಾ! ಅಪ್ಪನ ಧನೀ ಕೇಳಿದ್ರ ಗೋಣಮುರಿಸಿಕೊಂಡ ಸರಸ್ವತಿ ಅತ್ಲಾಂಗ ಆಗ್ತದ. ತಲೀಬುರಡಿ ಅಂಥಾ |ಕುಂಬಳಕಾಯಿಗೆ ಯಾವ ಸುಡುಗಾಡದಾಗಿಂದೋ ಬಿದಿರು ಸಿಗಿಸಿ...ನಾಕು ತಂತೀ ಒಳಗ ಮೂರುವರೀ ತಂತಿ ಹರದಾವ,...ಡೌಲಿಗೆ ತಂಬೋರಿ ಅಂತ ಹಿಡಕೊಂಡ ಬಂದಾನ ಬ್ಯಾರೆ..."ಏನು ಬೇಡಲಿ ನಿನ್ನ ಬಳಿಗೆ ಬಂದು"... ನಮ್ಮ ಬಳಿಗೆ ಬರಬ್ಯಾಡ್ರಿ; ನಮ್ಮನ್ನ ಬೇಡಬ್ಯಾಡ್ರಿ. ನಮ್ಮ ಓಣೀ ಹತ್ತರ ಹಾಯಬ್ಯಾಡ್ರಿ; ನಮ್ಮ ಪ್ಯಾಟಿ ಸನೇಕ ಸುಳೀಬ್ಯಾಡ್ರಿ. "ಏನು ಬೇಡಲಿ ನಿನ್ನ ಬಳಿಗೆ ಬಂದು..." ಕೊಡೋ ದೇವರಿಗೆ ಬೇಡೋದು ಬಿಟ್ಟು, ಬೇಡೋ ಬಡವರಿಗೆ ನೀವು ಗಂಟ ಬೀಳ್ರಿ ನಿಮ್ಮ ಪದಾ ಹಚ್ಚಿ! ಒಳ್ಳೇ ಲೆಕ್ಕಾ! ಪುರಂದರದಾಸ್ರು ದೇವರಿಗೆ ಕೂಡ ಬೇಡಲಿಲ್ಲಾ, "ಬೇಡಲಾರೆ" ಅಂತಂದ್ರು. ಈ ಕುಂಟದಾಸ್ರು, ... ಸಂಗಿಗೊಂದಿ, ಗುಡ್ಡಾಮಡ್ಡೀ ಒಂದೂ, ಬಿಟ್ಟೂ ಬಿಡದ.. ಕುಂಟಗೋ ಕೂರಗ್ಯೊ ಅನಕೋತ...ಎಲ್ಲಾ ಕಡಿಗೂ ಬಿಕ್ಷಾ ಬೇಡ್ತಾರ. ಹಾದಿ ಇದ್ರ ವೈಕುಂಠಕ್ಕ ಹೋಗಿ ವಿಷ್ಣೂಕ್ಕೂಡ ಗಂಟುಬೀಳೋ ಮಕ್ಕಳು. ಇಂಗ್ರೇಜಿ;

( ಮುಂದೆ ಸ್ವಲ್ಪ ಕಾಲದಲ್ಲಿಯೇ ಒಬ್ಬ ದೇಶಸೇವಕರು ರಾಷ್ಟ್ರೀಯ ಫಂಡಿಗಾಗಿ ಸಾಯಕಲ್ಲು ಹತ್ತಿಕೊಂಡು ಬಾಗಿಲಬಳಿ ಸುಳಿಯುವರು. ಅವರನ್ನು ಕಂಡು, ಎದ್ದು ಬಂದು )

ಇವರ್‍ಯಾರಿರುವರು? ರಿಸ್ಟವಾಚ ಹಾಕ್ಕೊಂಡು ಫಾಉಂಟನಪೆನ್ನು ಚುಚ್ಚಿಕೊಂಡು ಸಾಯ್ಕಲ್ ಮ್ಯಾಲ ಹತ್ತಿ ಇತ್ಲಾಗ ಬರತಾರ ? ಕಿಸೇದಾಗ ಅವೇಅಲ್ಲಾ ಪಾವತಿ ಪುಸ್ತಕ! ಯಾವದೋ ಫಂಡ ಬೇಡೋ ದೇಶಭಕ್ತರು ಕಾಣ್ತದ. ಹಳೇ ಜಾತೀ ಬ್ರಾಹ್ಮಣರಷ್ಟೇ ಭಿಕ್ಷಾ ಬೇಡಾವ್ರು ಅಂತಿಳಕೊಂಡ್ರ ಈ ಹೊಸಾ ಬ್ರಾಹ್ಮಣ್ರ ಜಾತೀ ಹಣೇ ಬಾರನೂ ಇದಃನೇ ? ಯಾಕೊ ... ಆ ಹುಡುಗನ್ನೇನೋ ಕೇಳ್ತಾರ. ಛಲೋ ಆತು ಆ ಹುಡುಗನ್ನ ಕೇಳಿಕೊಂಡು ಅತ್ತಿಂದತ್ತ ಹೋದ್ರ ನೆಟ್ಟಗ... ..ಇಲ್ಲೇ ಅಂಕೀಹಾಕ್ತೇವಿ; ರೊಕ್ಕಾ ಕೇಳಬ್ಯಾಡ್ರಿ ಅಂತ ಹೇಳಿದ್ರಾತು......ಯಾಕೋ ದೂರಿಂದ ನಮ್ಮ ಮಾರೀ ಕಡೆ ದಿಟ್ಟಿಸಿ ನೋಡಿಲಿಕ್ಕೆ ಹತ್ತ್ಯಾರೇ! ಮುಖಸಾಮುದ್ರಿಕ ತಿಳಿತದೇನು ಇವರಿಗೆ ? ಹೊಳ್ಳಿತು ಸಾಯ್ಕಲ್ಲು ಅತ್ಲಾಗ; ಪೀಡಾ ಹೋಯಿತು. ಎಲಾ ಇವನ ಮತ್ತ ಇತ್ಲಾಗ ಹೊಳ್ಳಸತಾನಲ್ಲೋ ಸಾಯಕಲ್ಲೂ!! ...... ಹಾಂ ಉಳಕೊಂಡೆ ಮತ್ತ ಅತ್ಲಾಗ ಹೋದಾ ! ಬಲೇ ಮಿಜಿಮಿಜಿ ಜಾತಿ; ಈ ಚಳವಳಿಖೋರ ಮಂದೀ ಮನಸೂ ಬಲೇ ಚಂಚಲಾ. ಇವರ ಕಡಿಂದ ಸಿಗೂದಿಲ್ಲಾಂತ ಒಮ್ಮೆ ಮನಸಿನ ನಿರ್ಣಯ ಆದ ಮ್ಯಾಲೂ ಮತ್ತ ಪ್ರಯತ್ನಮಾಡಿ ನೋಡಬೇಕು ಅತ್ತ ಆಶ್ಯಾ ಬ್ಯಾರೆ ! ಬಲು ಆಶೆ ಬುರಕ ಕುಳಾ ಈ ಫಂಡ ಕೊಡಸೋ ಮಂದಿ...... ( ಹಾರ್ಮೋನಿಯಂ ತೆಗೆದಿಡುವನು. )

[ ಒಬ್ಬ ಜೋಗಿಗನು 'ಹೇಳ ಮಾಗಣಿ ಕುಲಾ ಎಲ್ಲಮ್ಮಾ ಎಂದು ಎಲ್ಲಮ್ಮನ ಮೇಲೊಂದು ಮರಾಠೀ ಹಾಡು ಹಾಡುತ್ತ ಬಾರಿಸುತ್ತ ಬರುವನು. ]

ಬಾ, ಬಾ; ಹ್ಯಾಗಣೇ ಏನ ಮಾಡತೀ? ನೀವೊಬ್ಬಾವ ಕಡಿಮಿ ಯಾಗಿದ್ದೀ? ದಕ್ಷಿಣ ಮಹಾರಾಷ್ಟ್ರದೇಶಾ!!...... ನೀಯಾಕ ಬಿಟ್ಟೀ! ನಿನ್ನ ಹಾಡತಿಳಿದಿದ್ರೂ, ನೀ ಬೇಡೋದು ತಿಳ್ಯಾದುಲ್ಲೇನು? ಬಾ, ಅಂದ್ರ ಬಂವ ಮಗಾ! ನಿಲ್ಲ ಅಲ್ಲೇ!! ಮುಂದಿ ಚ್ಯಾಷ್ಟೀಲೇ ಅಂತಾರೋ ಖರೇ ಅಂತಾರೋ ಅಂಬೋದು, ಮಾತು ತಿಳೀದಿದ್ರೂ ಮಾರೀ ಮ್ಯಾಲಿಂದೂ ತಿಳ್ಯಾದುಲ್ಲ, ಮಡ್ಡ ಸೂಳೀ ಮಗನ? ಮಾತು ತಿಳಿದ ಏನ್ ಮಾಡ್ತಾವ! ಹೊಟ್ಟೀನ ತುಂಬಿಸಿಕೊಳ್ಳಲಿಕ್ಕೆ ಹೊಂಟೀ. ಹೋಗಹೋಗು; ಜಗದಂಬಾ ಅಂದ್ರೂ ಹಾಕೂದುಲ್ಲಾ, ಎಲ್ಲಮ್ಮಾ ಅಂದ್ರೂ ಹಾಕೂದುಲ್ಲಾ. ಎಲ್ಲಮ್ಮಾ ಅಂದ್ರ ಹಾಕ್ತೆವೀ ಅಂತ ತಿಳಕೊಂಡ್ಯೇನು? ತಿರಕೊಳ್ಳೊವರಿಗೆ ಹಾಕೋ ಹಾಂಗಿಲ್ಲಾ ಅಂತ ನಾನು ನಿಯಮ ಮಾಡೇನಿ– ವ್ರತಾ. ನೀ ಮರಾಠೀ ಹಾಡು; ಕನ್ನಡ ಹಾಡು. ಯಾವ ಭಾಷಾ ಆದ್ರೇನು? ತಿರುಕೊಂಬೋದು ಸುಳ್ಳೇನು? ಸಾಗು ಮುಂದಕ. ಇನ್ನು ಮ್ಯಾಲೆ 'ತಿರುಕ' ರ್ಯಾರೂ ಇಲ್ಲಿ ಬರಬಾರದು' ಅಂತ ಬೋರ್ಡ ಹಚ್ಚಸಾವ ಇದ್ದೇನಿ, ಅಂದರಾರೇ ಕಟಕಟಿ ತಪ್ಪತದೇನೋ ನೋಡಬೇಕು!!! ಆ–ಎಷ್ಟು?- ಹತ್ತು? ಡ್ರೆಸ್ಸಿಂಗು–ಇವತ್ತೇನು?? (**ಅಪ್ ಟುಡೇಟ ಡ್ರೆಸಿಂಗ ಮಾಡಿಕೊಳ್ಳುತ್ತಿರುವನು.**)

[**ಆ ವೇಳೆಗೆ ಒಬ್ಬ ಮಾಧೂಕರೀ ಹುಡುಗನು 'ಓಂ ಭವತೀ ಭಿಕ್ಷಾಂದೇಹಿ' ಎನ್ನುತ್ತ ಬರುವನು.**]

ಏ! ಓಂಭೋತೀ ಬಿಸ್ಯಾಂದೇವಿ. ಭೋತಿಗೀತಿ ಇಲ್ಲ್ಯಾರೂ ಇಲ್ಲಾ. ಎಲ್ಲೀ ಭೋತಿನ್ ತರಲಿ? ಇಡಿಲ್ಲಿ ಆ ಜೋಳಿಗಿ! ನಾವೂ ನೀವೂ ಊಟಾ ಮಾಡೋಣು; ಆಮೇಲೆ ಗೋವಾ ಹಚ್ಚಿಕೊಂಡು ಹೋಗು...ಮಕ್ಕಳಿಗೆ ಸುಲಭಾಗಿ ಬಿಟ್ಟೇದ! ... ಒಂದೆರಡೆಳೀ ಜನಿ

ವಾರಾ ಹಾಕಿಕೊಂಡು,ಒಂದೂವರಿ ಗೇಣು ಲಂಗಟಾ ಸಿಗಿಸಿಕೊಂಡು, ಸೊಟ್ಟ ನಾಮಾ ಹಚಿಕೊಂಡು ಜೋಳಿಗೀ ತಗೊಂಡಾವ್ರೀ ಹೊರಟ್ರು 'ಓಂ ಭೋತಿ ಬಿಸ್ಸಾಂದೇವಿ' ಅಂತ! ಗಾಯತ್ರಿ ಮಂತ್ರದಕಿಂತ ಮಾಧೂಕರೀ ಮಂತ್ರಾನೇ ಹೆಚ್ಚಿನದಾಗಿ ಬಿಟ್ಟೇದ. ಇನ್ನು ಮುನ್ನೀ ಪಾಲ್ಪೀಯುವರು ಲಾಯಸೆನ್ಸ ಇಲ್ಲದೇ ಬಿಕ್ಷಾ ಬೇಡೋ ಹಾಂಗಿಲ್ಲ ಅಂತಾ ಕಾಯ್ದೇ ಮಾಡಲಿಕ್ಕೆ ಬೇಕು. ಅಂದರೇನಾದರೂ ಸ್ವಲ್ಪ ಹಣ್ಣಿಗೆ ಬಂದಾರು. ಚಲೇ ಜಾವ್! — ಹೂ ಹಾದಿ ಹಿಡೀ—

(ಡ್ರೆಸ್ಸು ಪೂರಾ ಮುಗಿಸಿಕೊಳ್ಳುವನು.)

[ಅನಂತರ ಅತ್ತಣಿಂದ ಒಬ್ಬ ಗೊಲ್ಲಳಾಕೆಯು 'ಗೋವಿಂದಗ ಊಟ ನೀಡ್ರೆವ್ವೋ—ಕಮಲಾಬಾಯಿ, ವಿಮಲಾಬಾಯಿ, ನಾಗೂಬಾಯಿ, ಭಾಗೂಬಾಯಿ, ಗಂಗಾಬಾಯಿ, ತುಂಗಾಬಾಯಿ, ತುಳಸಾಬಾಯಿ, ಇಂದ್ರಾಬಾಯಿ, ಸುಂದ್ರಾಬಾಯಿ, ಸುಬ್ಬಾಬಾಯೀ, ಎಂದು ಕೂಗುತ್ತ, ಕೈಯಲ್ಲಿ ಚೀಪ ಹಣೆಯುತ್ತ ಒಂದು ಕರೀ ಮೋರೆಯ ಮಗುವನ್ನೆತ್ತಿಕೊಂಡು, ಬರುವಳು.]

ಏ ಬಾಯಿ ಬಾಯಿ ಬಾಯೀ; ಮುಚ್ಚುಬಾಯಿ ... ಅಹಹಾ ಏನು ರೂಪಾ!... ಏ ಗೊಲ್ಲರ ತಿಪ್ಪೀ! ಎಂಜಲ ತುಪ್ಪದ ಕೈಯನಾದರೂ ಎಂದಾರೆ ತಪ್ಪಿ ತಲೀಗೆ ಒರಿಸಿಕೊಂಡೀಯೇನು ? ಆ ಬಟ್ಟೆಗೆ ಮುಕರಿದ ನೊಣಾ ನೋಡಿದರೆ ನೊಣದ ಬಟ್ಟೀನ ಉಟ್ಟಾಳೇನೋ ಅನಸ್ತದ. ಕೆಲಸಾ ನೋಡಿದರ ತಿರಕೊಳ್ಳೋದು. ಆದರ ಈಚಲ ಚಾಪೀ ಹೆಣೆಯೂ ವಯ್ಯಾರ ಯಾಕ ಬೇಕು ? ಹುಂ ಸರಿ ದೂರ ಅಲ್ಲಿ ಕಾಲಿಡಬ್ಯಾಡಾ, ಕಲ್ಲು ಎಲ್ಯಾರೆ ಕೊಳತಾವು! ಏನು ಮೈ!! ಈ ವರ್ಷದಾಗ ಬೆವರಾದರೂ ಬಂದಾಗ ಮೈ ತಿಕ್ಕೊಂಡಿದ್ದೇನು ? ಬಣ್ಣಾದರೂ ಏನು ? ಇವರ ಅವ್ವಾ ಬಸುರಿದ್ದಾಗ, ಅಮಾಸೀ ದಿನ, ಮಧ್ಯ

ರಾತ್ರೀಯೊಳಗ, ಮುಸುಕು ಹಾಕ್ಕೊಂಡು, ಡಾಂಬರಿನೊಳಗ ಇದ್ದಲೀ ತೆಯ್ದು, ಬಯಕೀ ತೀರಿಸಿಕೊಳ್ಳಲಿಕ್ಕೆ ಕುಡಧಾಂಗ ಕಾಣ್ತದ... ಸಾಕಾಗ್ದ ವ್ಯಾಲೆ ಹಿಡೀ ಕರಿಬಟ್ಟೊ, ಹತ್ತುಕೇರಿಯೂ ತಿಂದಿರಬೇಕು! ಬಿಡು ಕತ್ತಲಾ ಬಿಡು. ಏನು ಯಾವದಾದರೂ ವಾಶಿಂಗ ಕಂಪನೀ ಯೊಳಗ ಡಬ್ಬಲ್‌ಚಾರ್ಜು ಕೊಟ್ಟು ಇಸ್ತ್ರಿ ಮಾಡಲಿಕ್ಕೆ ಕೊಡಲ್ಯೋ? ಅಲ್ಲೀ ಮತ್ತೀ — ಇರ್‍ಲಿ ಹೋಗಿ:—ಸುಂಟು ಬಡೀಬ್ಯಾಡಾ. (ತುಸು ಹೊತ್ತು ಅತ್ತಿತ್ತ ಅಡ್ಡಾಡಿ ನಿಧಾನಿಸುತ್ತ) ಛೀ! ಛೀ. ನಮ್ಮೂರೊಳಗ ಪ್ಲೇಗು ಅಂತ ಈ ಊರಿಗೆ, ಬಂದರ...ಇಲ್ಲೆ ತಿರುಕರ ಪಿಡುಗು! ಇವರೆಲ್ಲಾರ್ನೂ ನಮ್ಮೂರಿಗೆ ಕಳಿಸಿಬಿಡಬೇಕು....ಏನು ಪ್ಲೇಗು ಇವರಿಗೇ ಹೆದರಿ ಊರೂರು ಓಡ್ತದೋ, ಅಂತೀನಿ! ಗಾಳಿ, ಬೆಳಕು ಬರಲೀ ಅಂತ ಬಾಗಲಾ ತೆರೆದಿಟ್ಟರ ಎಲ್ಲಾ ಬಾಗಲ್ದಾಗಿಂದೂ ಬರೇ ತಿರುಕರೇ ಬರಬೇಕೇ? ಪುಣ್ಯಾಕ್ಕ ಖಿಡಿಕಿಯೊಳಗಿಂದ ಬರಲಿಲ್ಲಾ! ಮಹಾರಾಯಾ, ಬಂಗಲೆ ಕಟ್ಟೆಸಿದಾವಾ, ಹಳೀ ಪದ್ಧತಿ ಇರಲೀ ಅಂತ ಒಂದೆರಡು ಬೆಳಖಿಂಡಿ ಇಟ್ಟಿದ್ದರ, ಅದರಾಗಿಂದನೂ ಬರಾವರೀ ಈ ಮಕ್ಕಳು !!! ಕಿನ್ನರೀ ಜೋಗೀ ಕವಿತಾದಾಗ ಹೇಳೀದಲ್ಲಾ ಆ— ಇಲೀ ಕಥೀ—

> ಇಲಿಗಳು ಇಲಿಗಳು ಇಲಿಗಳ ಹಿಂಡು
> ಬಳಬಳ ಬಂದವು ಇಲಿಗಳ ದಂಡೂ
> ಅನ್ನದ ಮಡಕೆಯು ಒಳಗಿಂದ
> ಟೋಪಿಯು ಗೂಡಿನ ಒಡಲಿಂದ
> ಅಟ್ಟದ ಮೇಲಿಂ ಬಂದವು ಕೆಲವು
> ಕಣಜದ ಬದಿಯಿಂ ಬಂದವು ಹಲವು

ಬಂದವು ಅಂಗಿಯ ಕಿಸೆಯೊಳಗಿಂದ
ಮಕ್ಕಳ ಕಾಲಿನ ಚೀಲಗಳಿಂದ
ಸಣ್ಣಿಲಿ, ದೊಡ್ಡಿಲಿ, ಮೂಗಿಲಿ, ಸುಂಡಿಲಿ
ಗಂಡಿಲಿ, ಹೆಣ್ಣಿಲಿ, ಮುದಿಕಿಲಿ, ಹುಡುಗಿಲಿ
ನಲಿಯುತ ಉಲಿಯುತ
ಎಲ್ಲಾ ಬಂದವು ಓಡೋಡಿ
ಹಾರುತ ಬಂದವು ಕುಣಿಯುತ ಬಂದವು
ನೆಗೆಯುತ ಬಂದವು ಜಿಗಿಯುತ ಬಂದವು
ಓಹೋ ಬಂದವು ಹಿಂಡ್ಹಿಂಡಾಗಿ
ಜೋಗಿಯು ಬಾರಿಸೆ ಕಿನ್ನರಿಯ

ಅಂತಾರಲ್ಲಾ — ಆ — ಇಲೀ ಹಾಂಗ ಈ ತಿರುಕರು ಯತ್ಲಾಗ ತಿರುಗಿದರೂ ಹಾಜರ್ — — ಆ ಕಿನ್ನರೀ ಜೋಗಿ — ಆ ಪಾಯ್ಡ್ ಪ್ಯಾಪರ ಆಫ್ ಹ್ಯಾಮೆಲಿನ್ನ — ಮಾಡಿದ್ನಲ್ಲಾ ಹಾಂಗ ಈ ತಿರುಕರನೂ ಹಿಂಡಗಟ್ಟಿಸಿ ಒಯ್ದು ಹೊಳ್ಯಾಗ ಹಾಕಬೇಕು. ಇಲ್ಲದಿದ್ದರೇ, — ಈಗಿನ ದಿವ್ಸದಾಗ — ಸಂಘೇ ಶಕ್ತಿಃ ಕಲೌ ಯುಗೇ ಅಂತಂತಾರಲ್ಲಾ — ಹಾಂಗ ಈ ತಿರುಕರ್ನ ಹೊಡದೋಡಿಸಲಿಕ್ಕೆ ಒಂದು ಸಂಘಾ— ಸ್ಥಾಪಿಸಬೇಕು. ಭಿಕ್ಷುಕೋತ್ಪಾಟನ ಸಂಘ— ಅಂತೇನಾದ್ರು. ಇಲ್ದಿದ್ರ ಬಗಿಹರಿಯೂ ಹಾಂಗಿಲ್ಲ. ಈ ದಿವ್ಸದಾಗ ಇಷ್ಟು ಮಂದಿ ಇಷ್ಟ ಚಳವಳಿ ಮಾಡ್ತಾರ; ನಾವೂ ಒಂದಿಷ್ಟ ಏನಾರ ಮಾಡಬೇಕು — ಚಳವಳಿ. ಅಷ್ಟೇ ಸಮಾಜ ಸೇವಾ ಮಾಡಿಧಾಂಗಾತೂ — ಆ... ಆಗಲಿ — ಇಟೀಜ ಟೆನ್ ಥರ್ಟಿ— ಈಗ ಮದ್ಲ ಊಟಕ್ಕ ಹೋಗೋಣ. ಉದರ ಸೇವಾದಕಿಂತಾ ಯಾವುದು ಹೆಚ್ಚಿನ್ನು !!! (ಹೊರಡುವನು. ತೆರೆ ಇಳಿಯುವದು)

## ೩ನೇ ನೋಟ: ಕೊನೆಯ ಮಾತು

**ಮೊದಲಿನವ:**—(ವಕ್ತೃ ಬಂದು) ಮತ್ತ್ರೇನ್ ಲೆಕ್ಚರ ಕೊಡಲಿಕ್ಕೆ ಬಂದ್ನಪಾ ಇವಾ — ಅಂದೀರಿ ! ಲೆಕ್ಚೇರ್ – ಇಲ್ಲಾ ಪಕ್ಚರ್ ಇಲ್ಲಾ. ಹುಚ್ಚಾಟಾ ನೋಡಿದ್ರೆಲ್ಲಾ! ... ಇನ್ನೇ ನೀವೇ ಹೇಳ್ರಿ; ಇಂಥಾ ದೈವುಳ್ಳವರ್ನ್ನ ನೋಡಿ ನಗಬೇಕೋ ! — ಆ ತಿರಕೊಂಬವರ ಪಾರ್ಟೀ ನೋಡಿ ಅಳಬೇಕೋ !! ಇದೇನು ಸರಕಾರ ಮಾಡಿದ ಪಾಪೋ ! ನಮ್ಮ ಸಮಾಜದ ಪೂರ್ವ ಕರ್ಮನೋ?? ಆ–! ಅಲ್ಲಾ, ಅದ್ಯಾವದೋ ಒಂದು ಪಂಥದಾಗ, ಹೇಳೇದಂತೇ — ಏನಂತಂದ್ರ ಮೂಕ ಪ್ರಾಣಿಗಳಿಗೇ, ಹೆಂಗಸರಿಗೇ ಆತ್ಮಾ ಅಂಬೂದ ಇಲ್ಲಾ ಅಂತ !– ಹಾಂಗ ಈ ಭಾಗ್ಯವಂತರ ಪಂಥದಾಗ ಬಡಬಗ್ಗರಿಗೆ ಆತ್ಮಾ ಇಲ್ಲಾ, ಸುಖದುಃಖ ಇಲ್ಲಾ ಅಂತ ಹೇಳೇದೋ ಏನೋ ಅಂತೀನಿ! ಆದರೇ ನನಗ ಖರೇ ಅನಸೂದಂದ್ರ, ಇಡೀ ನಮ್ಮ ದೇಶಾನೇ ಬಡತನದಾಗ ಮುಳುಗಿ ಏಳ್ಳಿಕ್ಕೆ ಹತ್ತಿದ್ದರಿಂದ, ಅಸರಂತಾ ಈ ಬಡವರ ಗೋಳು ಕೇಳೀ ಕೇಳೀ, ಇದ್ದ ನಾಕು ಮಂದಿ ಭಾಗ್ಯ ವಂತರು ಅನಿಸಿಕೊಂಬವ್ರಿಗೆ ತಿಂದದ್ದೂ ಮೈಗೆ ಹತ್ತಧಾಂಗ ಆಗೇದ. ಆದ್ರ, ನಮ್ಮ ದೇಶದ ಬಡವರ್ರೂ ಭಾಗ್ಯವಂತರ್ರೂ ಕೂಡೇ ಬಡದು ಬಕ್ಕರಸೂ ಬರಗೇಡಿಗಳೇ ಬ್ಯಾರೇ ಇದ್ದಾರ — ಅದರ ಅರವು ನಮಗಿಲ್ಲಾ. ಈ ಅರವು ನಮಗಿಲ್ಲದ್ದಕೇ — ನಮ್ಮ ದೇಶದಾಗ ಭಾಗ್ಯವಂತರು ಅಂತ ಅನಿಸಿಕೊಳ್ಳುವ್ರಿಗೆ, ಬಡವರಂಬವರೂ ಕೂಡ ಮನುಷ್ಯರು, ಭಾಗ್ಯವಂತರ ಹೊಟ್ಟ್ಯಾಗಷ್ಟೇ ಜೀವ ಇದ್ದು, ಬಡವರ ಹೊಟ್ಯಾಗ ಮಾತ್ರ ಬರೇ ಖಾಲಿ ತುಂಬಿರೂದುಲ್ಲಾ — ಅಂತ

ಅಂಬೋ ಮಾತು ತಿಳೀತಿರಲಿಕ್ಕಿಲ್ಲಾ— ಅಲ್ಲ! ಹಿಂಗಿದ್ರೂ ಸುದ್ಧಾ ಈ ಶ್ರೀಮಂತರಂಬಾವ್ರು ಬಡವರಿಗೆ ಚುಚ್ಚೋದರೇ ಎಷ್ಟು! ಆಗಲಿ, ಶ್ರೀಮಂತರಂದಾಕ್ಷಣಕ್ಕೇ ಇವರಿಗೆ ಅಂತಃಕರಣಾಗಿಂತಃಕರಣಾ ಅಂಬುದೇನೂ ಇರಲಿಕ್ಕಿಲ್ಲ!! ಏನು, ಆ ಅಂತಃಕರಣದ ಜಾಗಾಕ್ಕ ತಿರಕರ ಹರಕ ಮುಚ್ಚೀ ಅಟ್ಟೀ ಇಟ್ಟು ಕಳಿಸ್ಯಾನೋ ದೇವ್ರು!?? ನೋಡ್ರಿ, ನೀವೇ ನೋಡ್ರಿ, ತಿಳಿದವರಿದ್ದೀರಲ್ಲಾ ವಿಚಾರಾ ಮಾಡ್ರೀ ಆತು. ಗುಡ್‌ನಾಯಿಟ್—ಅಂದ್ರು ಗುಡ್‌ಬಾಯ್—ಅಂಥಾಂಗ-ಅಂದ್ರು ಆಟ ಮುಗೀತು. ಹೋಗಿ ಬರ್ತೇನಿ. (ಹೋಗುವನು.)

'ದತ್ತಾತ್ರೇಯ ಬೇಂದ್ರೆ'

ಎಪ್ರಿಲ್ ೧೯೩೦

# ಹಾಳ್ ಗಂಡು

( ಒಂದು ಕಲ್ಪನೆ )

[ ತಮ್ಮಣ್ಣ ಹೊರಗಿನಿಂದ ಮನೆಗೆ ಬರುವ ಹೊತ್ತಿಗೆ ಪತ್ರ ಬಂದಿತ್ತು. ಒಡೆದು ನೋಡಿದ. ಕಣ್ಣು ಹರಿದು ಹರಿದು ನೀಡಿ ನೀಡಿ ನೋಡಿದ. ನೋಡುತ್ತಲು "-ಅಯ್ಯೋ-ಅಯ್ಯೋ-ಗಂಡು-" ಎಂದು ಚಿಟ್ಟನೆಚೀರಿ ನೆಲಕ್ಕೇ ಬಿದ್ದ.-ಏನಾಯಿತೋ ಘಾತ ಎಂದು ಒಳಗಿಂದ ಓಡೀ ಬಂದಳು ತಾಯಿ. "ಯಾಕೋ ತಮ್ಮಣ್ಣ ಏನೋ ಅದು-ಏನಾತೋ- ಏನೋ ಅದು- ಅವ್ವಾ-ಪತ್ರಾ"- ಎಂದು ಅವಳೂ ಕೊನೆಗೆ ಚೀರಿ ಬಿಟ್ಟಳು. ತುಸು ತಡೆದು "ಏನೋ ತಮ್ಮಾ, ಏಳು ಮಾಲಕ, ಯಾರದೋ ಪತ್ರಾ; ಏನೋ ಸುದ್ದಿ-" ಎಂದು ಗೋಳಿಡುತ್ತ ತಾಯಿಯೆಂದಳು.]

**ತಮ್ಮಣ್ಣ**:- ಅವ್ವಾ- ಅಯ್ಯೋ- ಘಾತಾಯಿತು, ಮನೀಯೆಲ್ಲಾ ತೊಳದ್ಹೋತು. ಇನ್ಹ್ಯಾಂಗಮಾಡ್ಲೀ-ಈ- ನಾ ಹ್ಯಾಂಗ ಮಾಡ್ಲೀ.

**ತಾಯಿ**:-(ದ್ಯಾಸದಿಂದ) ಏನಾತೋ ತಮ್ಮಾ-ನನಗಷ್ಟು ಹೇಳೋ- ಏನದು ಸುದ್ದೀ"-

**ತಮ್ಮ:—** ಹೇಳಬೇಕೇನೂ – ಬಿಡಬೇಕೇನೂ?– ಮುಂದ್ಯಾಗ ಮಾರೀತೋರಸ್ಥಾಂಗಾತು– ನೋಡಿಲ್ಲೆ– ಇಕಾ– ಕಾಣಸ್ವಲ್ದೇ–?

**ತಾಯಿ:—** ನನಗೇನ್ತಿಳೀತದೋ– ಹೇಳಬಾರದ ಅರಿಷ್ಟಾ– ಬರೇ ಯಾಕ ಹೊಡಕೋತೀದಿ.

**ತಮ್ಮ:—** ಅಯ್ಯೋ ಹ್ಯಾಂಗರ ಹೇಳ್ಲೇ– ಅವ್ವಾ– ( ಎದೆಬಡಿದು ಕೊಳ್ಳುತ್ತ ) ಆಕೀ– ಆಕೀ– ಇದ್ದಾಳಲ್ಲಾ ಮನಿಮುರಿಕೀ—– ಗಂಡ ಹಡದ್ಲಂತವ್ವಾ ಗಂಡೂ– ಅಯ್ಯೋ– ಪ್ರಥಮಗ್ರಾಸೇ ಮಕ್ಷಿಕಾ ಪಾತಾತೂ– ಅಯ್ಯಪ್ಪಾ– ಅಯ್ಯಯ್ಯೋ– ಹ್ಯಾಂಗ್ಮಾಡ್ಲೀ.

**ತಾಯಿ:—** ( ದೊಡ್ಡದನಿಯಿಂದಳುತ್ತ )– ಅವ್ವಾ ನಮ್ಮವ್ವಾ–! ಹೌದೇನೋ ತಮ್ಮಾ, ಕೂಸು ಸತ್ತೇ–ೕ–ಅಯ್ಯೋ– ಮುತ್ತಿನಂಥಾ ಚೊಚ್ಚಿಲಗಂಡಸಮಗನ್ರೇ– ನಮ್ಮವ್ವಾ.

**ತಮ್ಮ:—** ಎಲ್ಲೀದೂ– ಸಾಯ್ಲಿಲ್ಲವ್ವಾ ಸಾಯ್ಲಿಲ್ಲಾ– ಅದ್ಯಾಕ ಸತ್ತೀತು. ನನ್ನ ಗ್ರಹದಮ್ಯಾಲೇ ಹುಟ್ಟೇದ. ಸತ್ತಿದ್ರ, ನಾಯೆಲ್ಲೆ ಇಷ್ಟ್ಯ ಎದಿಬಾಯ್ಬಿಡ್ತಿದ್ದೆ–- ಅಯ್ಯೋ— ಅವ್ವಾ– ( ಎಂದು ತಾಯಿಗೆ ತೆಕ್ಕೆಬೀಳುವನು. )

**ತಾಯಿ:—** ( ಆತನನ್ನು ಎಬ್ಬಿಸಿ–ತನ್ನ ಕಣ್ಣೀರು ಒರಸಿಕೊಂಡು ನಿಟ್ಟುಸುತ್ತ) ಹಾಂಗಾರ ಯಾಕೋ— ಇಷ್ಟ ರಂಭಾಟಾ— ಮನೀ ಹಾರಿಬೀಳೂ ಹಾಂಗೇ—ಖೋಡೀ—ಏಳ್‌ಮ್ಯಾಲ್ಕ. ಮುತ್ತಿನ್ಹಾಂಗ—ಚೊಚ್ಚಲ ಗಂಡಸ್‌ಮಗನ್ನ ಹಡದಾಳಂತ ನನ್ನೊಸಿ,—ಹೂಂ ಏಳು—ಅಲ್ಲಿಕ್ಕೇ ನಾತೋ ಧಾಡೀ ನಿನಗ ೯, ಏಳು— ಹೂಂ— ಹೋಗು— ಫೇಡೆ ತೊಗೊಂಬಾ– ಇಕಾ– ಮುಡುಪುತೆಗದಿಟ್ಟೇನಿ– ಸತ್ಯನಾರಾಯಣ್ಣ ಮಾಡನ್ನೂಣಂತ.

**ತಮ್ಮ:**—ಅಯ್ಯೋ—ನನಗೊಂನ್ಹತ್ತಿದ್ರ—ನಿನಗೇನ್ ಹತ್ತೇದೇ— ದುರಿಗೀ—; ತಾಯುಂತೇ—! ತಾಯೀ ನೀನು—! ಮಾರಿ—! ಮಾರೀ—!! ನನ್ಮನೀ ಹಾಳ್ಮಾಡೂಬೇಕೂಂತ ಹರಕೀಹೊತ್ತಿದ್ದ್ಯಾ—ಗಂಡ್ಹುಟ್ಟ್ರಿ—? ಆ—ನನಗೇ ಹೊಟ್ಟ್ಯಾಗ್ಬೆಂಕಿಬಿದ್ದೇದೇ—. ನಿನಗ ಮಾತ್ರ ಹಾಲು ಕುಡದ್ಹಾಂಗ ಆತಲ್ಲ—— ಆ—

**ತಾಯಿ:**—( ಏನೂ ತಿಳಿಯದೆ ದಿಙ್ಮೂಢಳಾಗಿ— ಕುಗ್ಗುದನಿಯಿಂದ ) ಹಾಂಗ್ಯಾಕಂತೀದ್ಯೋ ತಮ್ಮಾ—? ಗಂಡ್ಹುಟ್ಟಿದ್ರ ಶುಭಾಅಲ್ಲೇನೋ ಮನ್ತನಕ್ಕೇ—! ಎಲ್ಲಾರೂ ಗಂಡೂ ಗಂಡೂ ಅಂತ ಗಾಗರಿತಾರ— ನೀ ಯಾಕ— ಮತ್ತ— — —

**ತಮ್ಮ:**—ಅಯ್ಯೋ ಅವ್ವಾ—ಆ ದಿನಾ ಹೋದ್ವು, ಈಗಿವು ಹೊಸಾ ಕಾಲಾ— ಮನ್ವಂತರಾ ತಿರಿಗೇದವ್ವಾ— ನೀಯಿನ್ನೂ ಹಳಬರ್ಹಾಂಗ ಮಾತಾಡ್ತಿ— ಈಗ ಇದು ಇಪ್ಪತ್ನೇ ಶತಮಾನವ್ವಾ——ನಮ್ಮಂತವು ಸ್ಯಾನ್ದಾಗೇ ! ನಿಮಗೇನ್ತಿಳಿದೀತು— ಹಳೇ ಜನರಿಗೇ —; ನನಗ ಜೀವೆಲ್ಲಾ ತೆಳಗ ಮ್ಯಾಲ ಆಗಲಿಕ್ಹತ್ತೇದ— ಆಕಿ ಮನೀಗೊಂದೇ ಬರ್ಲಿ—ಕೂಸಿನ್ನೆತ್ತ್ಯಯ್ದು ಭಾವ್ಯಾಗ ಒಗದಬರ್ತೇನಿ.

**ತಾಯಿ:**— ಅಯ್ಯ ಅರಿಷ್ಟಮುಂಡೇದೇ— ಶುಭಾನುಡೀಬಾರ್ದೇ ಮುಂಡಾನೆದ್ದು—; ಏನೊ— ಇದು ಹಾಳ್ರಗಳೀ—

**ತಮ್ಮ:**— ಅವ್ವಾ ನಿನಗೇನ್ಗೊತ್ತು ಅದರ್ಸುಖಾ— ನನಗ್ಗೊತ್ತದೇ ಇಲ್ಕೇಳು—; ಹಡೀಲಿ— ಎಲ್ಲಾ—ಹೆಂಗ್ಸೂರೂ ಹಡಿಯೋದೇ—. ಆದ್ರೀ ಈಕಿಗೆ ಹೆಣ್ಣು ಹಡೀಲಿಕ್ಕೆ ಏನ್ಬ್ಯಾನಾಗಿತ್ತೇ—? ನಾಕ್ಮೂತ್ತಿನಂಥಾ ಹೆಣ್ಮಕ್ಕಳ್ನ ಮುಂಟಟ್ಕೊಂಡ್ಹುತ್ರ ಎಷ್ಟಾನಂದಾ— ಈಗಿನ್ದಿವ್ಸದಾಗ—! ಇರ್ಲಿ, ನಡೀ ಒಳಗೇ— ಹೋಗೋಣು. ಅಡಿಗೀಮಾಡನಡೀ—ಎಂಥಾ

ದುಃಖ ಬಂದ್ರು ಖೋಡಿ ಹೊಟ್ಟಿಯೊಂದು ಅದೇಅಲ್ಲಾ– ಬಕ್ಕರ್‍ನ ಲಿಕ್ಕೆನ್ಯಾಬೇಕೇ (ಶಾಯಿ ಒಳಗೆ ಹೋಗುವಳು)– ಕೊತಕೋ ಅವ್ವಾ ಅಲ್ಲೇಕೂಡು. ಎಲ್ಲಾ ಹೇಳ್ತೇನಿ– ನಿನ್ಮುಂದಲ್ಲದೇ– ಮತ್ಯಾರ ಮುಂದ ತೋಡಿಕೊಳ್ಳಿ– ನನ್ನ ಸಂಕಷ್ಟನೇ–? ಇದು ನೋಡು– ಅವ್ವಾ– ಈಗೇ– ಗಂಡನಕಾ ಹುಟ್ಟತೇ–ೀ–? ಆ–ನಾವೇನ್ ಶ್ರೀಮಂತ್ರೇ ಗಂಡು ಹಡೀಲಿಕ್ಕೆ–? ಹೊಟ್ಟೆಗೇ ಬಟ್ಟೆಗೇ ಚಾಟಮಾಡಬೇಕಾದ್ರೇ ಕಣ್ಣೀರ ಕಪಾಳಕ್ಕ ಬರತಾವ. ಅಂಥಾದ್ರಾಗ ಮತ್ತ ಗಂಡಹಡಕೋತ ಕೂತ್ರ ಬಾಳ್ವಿ ಹ್ಯಾಂಗ'ಸಾಗೀತು–? ಮನ್ಯಾನ ಹ್ಯಾಂಗ ನಿಂತೀತು–?? ನಾಳೀ ಹುಡುಗ ದೊಡ್ಡಾವಾದ್ನಂದ್ರ, ಮೊದ್ಲ ಬಂತೇ ಜಾವಳಾ– ಆಮ್ಯಾಲ್ಛಂಡಿಕೆ ಅಂಬೂದ್ರಾಗೇ ಮುಂಜೀನೇ ಬರ್‍ತದ; ಇದಕ್ಕೆಲ್ಲಾ ಅಂದ್ರು ಎಷ್ಟು ದುಡ್ಡುಬೇಕೂಂತಿದಿ. ಏನಿಲ್ಲಂದ್ರೂ ನಾಕೈದು ನೂರ್‍ರುಪಾಯೆರೇ ಬ್ಯಾಡೇ!–ಕೆಟ್ಟ ಬ್ರಾಹ್ಮಣಜನ್ಮ–ಅದಷ್ಟ ಸುಟ್ಟಬರ್‍ಲಿ ಒಯ್ಯೊಂದೂ–ಇವನೆಲ್ಲಾ ಬಿಡೂಹಾಂಗಬ್ಯಾರೇ ಇಲ್ಲೇ–. ನಾಬಿಟ್ಟೇ ನೆಲ್ಲಾ–ಖರೇ–ಆದರೀಭಾಗಾದೇರೊಂದಿದ್ದಾರಲ್ಲಾ– ಮೂಲಾಗೀ! ಮ್ಯಾಲೇ ಅದೊಂದು ಧೊಡ್ಡ ಬಾವುಗಾ ಕೂತದ, ಯಾವಾಗ, ಯಾರಿಗೆ ಬಹಿಷ್ಕಾರಾ ಹಾಕೇನೋ ಅಂತ. ಹಿಂದಾಗಡೆ ಜಾತೀ ಉಳ್ಸಿಗೋಬೇಕಾದ್ರೇ, ಅದರ ಹೆಣಕ್ಕೆಲ್ಲಿ ಹಣಾಬಡೀಲಿ? ಅದನ್ನೆಲ್ಲಾ ತಪ್ಪಿಸಿಕೋಬೇಕಂತ– ಮುಂಜೀಮೂರ್ತಾ ಮಾಡೇನೇ– ಇತ್ಲಾಗ ಈ ಆಚಾರ್‍ರು, ನಾಯಿ ಕರಳು ಹರದಾಂಗ ದುಡ್ಡು ಹಿರೀತಾರ–. ಆತು, ಇದೂ ಎಲ್ಲಾ ಆತೂ ಅನ್ನು–; ಆ ಮ್ಯಾಲೆ ಗಂಡು ಹುಡುಗಾ ಅಂದ್ಮ್ಯಾಲೆ ಸಾಲಿಗನಕಾ ಕಳ್ಸಬೇಕೇ,– ಈ ಊರಾಗ ಖೋಡೀ– ಸರಕಾರೀ ಸಾಲಿಬ್ಯಾರೇ– ಇಲ್ಲಾ–. ಆ ಮುಂಡೇದ್ದು ಮಾಸ್ತರ್‍ಗ

ತಿಂಗಳಾ ಎರಡಾಣೆ ಫೀ ಒಂದು ಬಡೀಬೇಕು — ಅದೂ ಆಗ್ಲೀ — ಅದಷ್ಟು ಭಾರಾ ಯಾವದಾರ ರೈತರ್ಮ್ಯಾಲೆ ಹಾಕ್ಲಿಕ್ಕೆ ಬಂದೀತೂ ಽನ್ನು ಆದರ ಮುಂದ ಪಾಟೀ ಪೇನ್ಸಿಲೂ — ಪುಸ್ತಕಾ — ಒಂದೇ ಅವ್ಹಾ ಏನೆಂತ್ಹೇಳ್ಲೀ —. ನನ್ನಂಥಾ ನಾನು ತಿಂಗಳಾ ಎರಡು ಪಾಟೀ ಒಡೀತಿದ್ದೆ — ಪುಸ್ತಕಾಂಬೂದು ನಾಕ ದಿವ್ಸೇನು ನನ್ನ ಕೈಯಲ್ಯಾಗಿ ರ್ತಿದ್ದಿಲ್ಲ — ಆಗ ಅಪ್ಪ ಹ್ಯಾಂಗ ನಮಗೆಲ್ಲಾ ಈಡು ಮಾಡ್ತಿದ್ನೋ ಅಂತನಸ್ತದ — ಆವರೂ ಹಿರೇರ ಕಾಲಾ — ಅವರು ಹ್ಯಾಂಗೋ ಮಾಡಿದ್ರೂ ಅನ್ನು — ಇಷ್ಟಾದ್ರೂ ಎರಡೆರಡು ವರ್ಷ ಕಲ್ತರೂ ಕನ್ನಡ ಆರನೇ ಯತ್ತಾಯೇನು ದಾಟೋದಾಗಲಿಲ್ಲ — ಏನೋ ಒಂದು ಮುಲ್ಕೀ ಪರಿಕ್ಷಾ ಆದರೂ ಮಾಡಿಕೋಬೇಕಂತಿತ್ತು ಘುನ ಸಿನಾಗೀ— ಆದ್ರ ಅಷ್ಟೆಲ್ಲಾ ಪುಸ್ತಕಕ್ಕೀ ದುಡ್ಡೆಲ್ಲೆ ?– ಅದರೊಳಗ ಹುಣ್ಣಿನ್ಮ್ಯಾಲೆ ಬರೀ ಕೊಟ್ಟ್ಹಾಂಗ ಅಪ್ಪ ಬ್ಯಾರೇ ಹೋಗಿ ಬಿಟ್ಟ್ಯಾ!! ಆ ಮ್ಯಾಲನಕಾ ಸಂಸಾರದ ಭಾರಾನೇ ಕೊರಳ್ಗೆ ಬಿತ್ತು. ಇಕಾ ನನ್ನಂಥಾವ್ಗ ಇಷ್ಟು ತೋಬೋ ತೋಬೋ ಆತೂ — ಇನ್ನ ಆ ಸಣ್ಣ ಕೂಸು ಹ್ಯಾಂಗ ಮಾಡೀತು ! — ಮ್ಯಾಲೆ, ನಾ ಇಷ್ಟಕ್ಕೆಲ್ಲಾ ದುಡ್ಡೆಲ್ಲಿಂದ ತರ್ಲೀ–? ಹೆಣ್ಣುಹುಟ್ಟಿದ್ರ ಇಷ್ಟೆಲ್ಲಾ ಎಲ್ಲಿದ ತ್ರಾಸೂ–? ಒಂದ ಜಾವಳೀ? – ಚಂಡಿಕೀ?? – ಮುಂಜೀ??? – ಮ್ಯಾಲ ಸಾಲೀ ಕಲ್ಯೂ ಗೊಂದಲ ಇಲ್ಲಾ. ಪಾಟೀ ಪುಸ್ತಕದ ಖರ್ಚು ಉಳೀತು–. ಇಷ್ಟ್ಯಾಗಿ ಮನೀ ಒಳಗ ಬೇಕಾದ ಕೆಲಸಕ್ಕನುಕೂಲ – ದುಡೀಲಿಕ್ಕೆ ಒಂದಾಳು ಆದ್ಹಂಗ ಆಗ್ತಿತ್ತು. ಗಂಡ್ಸು ಹಾಂಗ ದುಡೀಲಿಕ್ಕೆ ಬರ್ತದೇ ಸುಟ್ಟಬರ್ಲೀ ! – ಸಾಲೀ ಮೂಲೀ ಅನಕಾ ಬಿಟ್ಟದ್ದಲ್ಲೀ – ಆಯ್ಯೋ ಏನ್ಹಾಲಿ–ೀ, — ಆ ಮಾಸ್ತರೂ ಯಮದೇವ್ಹ್ಯಾಂಗ — ದಿನ

ಬೆಳಗಾದರ ಜಜ್ಜೀ, ಜಡದೂ ನುಗ್ಗುನುಗ್ಗು ಮಾಡತಾರ! ಮ್ಯಾಲೆ ಅಳ್ಳೀ ಗಂಟು ಕಟ್ಟಿದ್ಹಾಂಗ – ತಲ್ಯಾಗ ತುರಿಕ್ಯೋಬೇಕು ಅವರು ಹೇಳಿದ್ದೂ ಬಿಟ್ಟಿದ್ದೂ ಎಲ್ಲಾ –. ಸಂಜೀ ಮುಂಜಾನೇ ಎಷ್ಟು ರೂಹಾಕಿದ್ರೂ ನನಗನಕಾ ಒಂದ ಕವಿತಾಯೇನ್ಪಾಠ ಮಾಡಲಿಕ್ಕೆ ಆಗತಿದ್ದಿಲ್ಲಾ, ಅದರ ಕಾಲಾಗ – ಇತ್ಲಾಗೇ ಅಪ್ಪನ ಹೊಡತಾ ಅತ್ಲಾಗ ಮಾಸ್ತರ ಜಡತಾ– ! ಅಂತೂ ನಾನೂ ಭಾಳ ಶ್ರಂಬಟ್ಟೆ. ಜೀವಾ ಅಂಬೋದು ಹಣ್ಣು ಹಾಗಲ್ಯಾಯಿ ಆಗಿಹೋತು–––––– ಥೂ ಥೂ ಥೂ – ಎಷ್ಟು ಹೊಗಿ ಮಾಡ್ತೀ ಅವ್ವಾ – ಊದಬಾರ್ದ ಒಲೀನ – ಛೀ ಛೀ, ಕಣ್ಣಾಗ ಮೂಗಿನಾಗ ಬಾಯಾಗೆಲ್ಲ ತುಂಬಿ ಬಿಟ್ಟಿತು ಖೋಡಿ ಹೊಗೀ – ನಿಮಗನಕಾ ಮುದಕ್ರಾದ್ರೂ ಒಂದು ಅಡಿಗೀ ಮಾಡ್ಲಿಕ್ಕೆ ಬರೂದುಲ್ಲ – ಏನ್ಸುಡ್ಬೇಕು ನಿಮ್ಮ ಹೆಣ್ಣ ಜನ್ಮಾನೇ – ಊದವ್ವಾ – ಈಗರೇ ಊದು – ಎಂಥಾ ಛಲೋ ಜಾಲೀ ಕಟಿಗಿ ತಂದ್ಹಾಕ್ಲೇನಿ ಕುರುಬರ ಬಸ್ಯಾನ ಕಡಿಂದ – ಬರೂ ರುಪಾಯ್ಬಿಟ್ಟು–; ಹೂಂ ಊದು– ! ಹೌದೇ–ಈಗ್ಯೋಡು ಹ್ಯಾಂಗ ಹೇಳಿಧಾಂಗ ಉರೀತಾವ (ಕುಸು ಕಡದು) – ಆತೇ – ಇಷ್ಟ್ಯಾಗಿ – ಹ್ಯಾಂಗಾರ ನಾಕೆತ್ತಾ ಕನಡು ಆದೀತು ಅನ್ನು–ಅಮ್ಯಾಲೆ ಇಂಗ್ಲೀಷು ಸಾಲಿ –, ಕಳ್ಸಬೇಕಲ್ಲಾ ಧಾರವಾಡಕ್ಕ. ಅದನ್ನೆಲ್ಲಾ ಬಿಟ್ಟು ಭ್ರಾಂಬರ ಹೊಟ್ಟೀಲೆ ಹುಟ್ಟಿ, ನಟ್ಟು ಕಡೀಲಿಕ್ಕೆ ಹೋಗೂದದನೇ ? ದನಾ ಕಾಯ್ಲಿಕ್ಕೆ ಹೋಗೂದದನೇ? ಹೊಟ್ಟೀದಸಿಂದ ಏನಾರ ಮಾಡಿ ನಾಕು ಇಂಗ್ಲೀಷು ಅಕ್ಷರ ಹೊಟ್ಟ್ಯಾಗ ಹಾಕ್ಯೋಬೇಕಲ್ಲ. ಇಲ್ದಿದ್ರ ಏನದ ಗತೀ; ಈಗಿನ್ ದಿವ್ಸದಾಗ ಕನಡು ಯಾರ್ಕೇಳ್ತಾರ, ಈಗ ನೋಡು ನನ್ದೇ ಅವಸ್ಥಿ ಏನಾಗೇದ–ಇರಲಿ. ದೈವಕ್ಕ ಪುಣ್ಯಾ

ದೂರು, ಧಾರವಾಡಾ– ಮಾಧೂಕಾ ಬೇಡಿತ್ರರೇ ನಾಕ್ಹತ್ತು ಕೂಳು ಹುಟ್ಟೇತು–ಮನ್ನೆ ಮನ್ನೆ ಏನೋ ಬಡಹುಡುಗರಿಗೆ ಇರಲಿಕ್ಕೆಂತ ವಿದ್ಯಾರ್ಥಿನಿಲಯ ಅಂತೇನೋ ಒಂದ್ಮಾಡ್ಯಾರಂತ- ಅಲ್ಲೆ ಹುಡಗನ್ನಿಡ್ಲಿಕ್ಕೆ ಬಂದೀತು. ಗಂಡ್ಹುಡ್ಗಾ–ಸಾಲೀ–ಇಂಗ್ಲೀಷ್‌ಸಾಲಿ ಕಲ್ಯಾವಾ ! ಅಂದ್ಮ್ಯಾಲೆ – ಕೋಟ್ಬೇಕು, ಶರ್ಟಬೇಕು, ಧೋತ್ರಾಬೇಕು ಕಾಲಾಗ ಬೇಕು–ತಲಿಮ್ಯಾಲಬೇಕು–ಇಷ್ಟಾದ್ರೂ ಮ್ಯಾಲೇ–ಆ ಬಕಾಸುರನ ಪಾಳೀ–ಫೀ ಅನಕಾ ತಪ್ಪಿಲ್ಲ ! ಅದಕೂ ನಾ ಹೆದರೂದುಲ್ಲಾ ಅನ್ನು–; ಅವ್ವಾ–ನಾನೂ ನಿನ್ನ ಕೈಯೂಗ ತಯಾರಾಗೇನಿ– ಅದಕ್ಯಾಕ ಅನಮಾನಾ–ಹಪ್ತೇ ವಸೂಲ್ಮಾಡೂವಾಗ ಅಷ್ಟೇಲ್ಲಾ ಹ್ಯಾಂಗಾರ ಹಿರದೇನಂತೇ–ಅಂತೂ ಹುಡುಗಾ ಮ್ಯಾಟ್ರಿಕ್ಕ ಹ್ಯಾಂಗಾರ ಆಗ್ತಾನನ್ನು– ! ಆದ್ರ ಈಗನ್ನಿದ್ವನ್ಸದಾಗೇ ಮ್ಯಾಟ್ರಿಕ್ಕ ಆದ್ರರೇ ಏನದ ಅಂತೀ ?–ನನ್ಯಾಕ ಲಕ್ಕ ನಾ ಮ್ಯಾಟ್ರಿಕ್ಕ ಆಗಿದ್ರ ಹೇನ್ಹೇಳ್ಲೀ–ನೊಡೇ ಬಿಡ್ತಿದ್ದೆ–ಒಂದು ಕೈ!! ಬೇಕಾದ್ಹಾಂಗ ಮಾವ್ನೋತೀ ಮಾಡ್ತಿದ್ದೆ–ತಿರುಗಿ ಕೇಳಿದ್ರ — ಹೂಪೂರ ಡೆಸ್ಟೀ ಹೊಡದ್ರೂ ಹೊಡಿತಿದ್ದೆ ಅನ್ನು. ಮೂರಾಳ್ನೂರು ರೂಪಾಯಿ ಪೇನ್ಶನ್ನು ಬರ್‍ತಿತು–ಧಾರವಾಡ್ದಾಗ ಮಾಳಮಡ್ಡೀ- –ಅದ್ಯಾಕೇ ಸೊಸಾಟೀ ಮಡ್ಡೀ ಮ್ಯಾಲೇ ಬಂಗ್ಲೇ ಕಟ್ಟಿಸ್ತಿದ್ದೆ–ಇರ್ಲಿ ಏನ್ಮಾಡುದೂ–ಆದಿನ ಹೋದುವು — ( ಕುಸುಕಡೆಸು ) ಅಂದ್ಮ್ಯಲೆ– ಕಾಲೇಜಕ್ಕನಾಕ್ಕ ಕಳಸ್ ಬೇಕೇ — ಪುಣ್ಯಾಕ್ಕ ಧಾರವಾಡ್ದಾಗೇ ಕಾಲೇಜು ಆಗೇದ — ಅಂದ್ಮ್ಯಲೆ ಹುಡುಗ್ಗ ಕಾಲೇಜೀ ಕಲಸ್ದಿದ್ರ ಹ್ಯಾಂಗಾದೀತು — ಏನಾರ ಮಾಡೀ ನಾಕ್ಮಂದೀ ಕೈಕಾಲು ಹಿಡಕೊಂಡಾದ್ರೂ ಹುಡುಗನ್ನ ಕಾಲೇಜಕ್ಕಳಸಬೇಕು. ಅನಿಷ್ಮ ಧಾರವಾಡ ಕಾಲೇಜ್ನಾಗೇ ನೂರಾರು ಸ್ಕಾಲರ್ಶಿಪ್ಪು ಅವೇ ಅಂತೇ—ಕುರುಬ್ರು

ಕ್ಯಾಣ ಬಿದ್ಹೋದ್ವು—ನಮ್ಮ ಹಿರೇರ ಪುಣ್ಯಾ ಎಲ್ಲಾ ಖರ್ಚಾತೂ ಅನ್ನೂ. ನಾ- ಅಂತ—ಅಷ್ಟರೇ— ಮಾಡಿಕೊಂಡೆ—ಹಾಂಗೂ ಹೀಂಗೂ ಇಲ್ಲೀತನಕಾ ಈ ಮನೀಗೆ ಬಂದ್ವಿ—; ಆದ್ರ ಈಗೇನು ಬೀಯೇ ಬಿಟ್ಟು ಅವರಪ್ಪನ್ನ ಘಾಸಾದಪ್ರು— ಒಂದ್ಮೂವತ್ರೂಪಾಯೀ—ಹೂಂ—ಹೂಂ— ಕೇಳಬಾರದು! ಅಯ್ಯೋ ನನ್ಮಗ್ಗ ನೋಕ್ರೀ—ನೋಕ್ರಿ ಹ್ಯಾಂಗ ಸಿಕ್ಕೀತು—( ಎದೆಬಡಕೊಳ್ಳುತ್ತ ) —ನೋಕ್ರೀ—ಅಯ್ಯೋ ಹೀರೇದೆವ್ವಾ— ದೊಡ್ಡಭೂತಾ— ಬ್ರಹ್ಮರಾಕ್ಷಸಾ—ನರಪಿಶಾಚೀ—ನೋಕ್ರೀ — ನೋಕ್ರಿ- ಹ್ಯಾಂಗ ಸಿಕ್ಕೀತು. ನನ್ನ ಮಗ್ಗ—!! ಬೀಯೇ ಪಾಸಾದಾ—ಬಿಯೇ!! ಒಂದು ಎಂಥಾದಾರೊಂದು ನೊಕ್ರಿ— ಹೊಟ್ಟೀಪೂರ್ತೆ—; !! ಅದು ಹ್ಯಾಂಗಾದೀತು——ೀ—ಹ್ಯಾಂಗಾದೀತೂ ಅವ್ವಾ—ಅಯ್ಯೋ— ಅವ್ವಾ— ಹಸಿವೀ—ಎಲಿಃ ಹಾಕು; ಅಡಿಗಾತಿಲ್ಲೋ? — ಸ್ನಾನಾ? ದೇವರ್‍ಪೂಜೀ ಹೂಂ ಇನ್ನೆಲ್ಲಿ ಸ್ನಾನಾ ದೇವರ್‍ಪೂಜೀ—!! ವೈಮ್ಯಾಲಾಕಾಶಾ ಕಡ ಕೊಂಡು ಬೀದ್ದೇದ! ಎಲಿಃ ಹಾಕ್ಮದ್ಲ ಅಯ್ಯೋ—ೀ—ನಾ ಬ್ರಾಹ್ಮಣ ಆಗಿದ್ರೂ ನನ್ಮಗಾ ಅರೇ ಬ್ರಾಹ್ಮಣ ಆಗಿರದಿದ್ರು— ಎಲ್ಲಾರ ಒಂದು ನೊಕ್ರೀ ಹತ್ತಿತ್ತೂ; ಇದೇನ್ಮಾಡಿಟ್ಟೀ ದೇವ್ರೇ! ಅಯ್ಯೋ ಈ ಬ್ರಾಹ್ಮಣ ಜನ್ಮಾ ಯಾಕ ಹುಟ್ಟಿಸಿದಿ—ವ್ಯಾಲೆ ಅವರ್‍ಗೆ ಗಂಡಸ್ಮಕ್ಕಳು ಯಾಕ್ಹುಟ್ಟ ಬೇಕೂ———ಒಂದು ನೋಕ್ರೀ ಇಲ್ಲಾ-ಅಯ್ಯೋ—ಪಾಪೀ ದೇವರ— ಇನ್ಮೇಲೇ ಗಂಡಸರನ್ನ ಹುಟ್ಟಸಬ್ಯಾಡಪ್ಪಾ—ಗಂಡ್ಸರಿಗೆ ದುಡ್ಡು ಹಾಳು ಮಾಡೋದೇ ಹೆಂಗ್ಸರಿಗೆ ಕಲ್ಸಿದ್ರ ಬೇಕಾದಂಥಾ ನೋಕ್ರಿ—ಲೇಡೀ— ಮಡ್ಡಮ್ಮ—ಬೇಖಾದ್ದ ಜಾಗಾ ಸಿಗ್ತಾವ——ಇನ್ಮ್ಯಾಲೇನೂ—ಬರ ಬರ್‍ತೀ—ಹೆಂಗ್ಸರ್‍ದ್ದ ಮೂಗ ವ್ಯಾಲೆ ಆಗ್ತದ-ಗಂಡ್ಸರ್ನ್ಯಾರು ಕೇಳ್ಬೇಕು! ಜೀವಾ ಹೋಗ್ತದಂತಂದ್ರ— ಗುಟುಕು ನೀರು ಬಿಡೂದುಲ್ಲಾ.

ನೋಕ್ರೀ ಎಲ್ಲೀ ನೋಕ್ರಿ !!! ಎಂಥಾ ಅನ್ಯಾಯ–ಅಬ್ರಹ್ಮಣ್ಯ–ಧರ್ಮ ಗ್ಲಾನಿ !!! –ಅಯ್ಯೋ ಪಾಪಿ–ಯಮರಾಯಾ–ಒಮ್ಮೆಗ್ಲೇ–ಜಗತ್ನಾಗಿನ ಗಂಡುಹುಡುಗರ್ನೆಲ್ಲಾನೂ–ಕುತ್ಗೀ ಹಿಚ್ಕಿಹಾಕಿಬಿಡಪ್ಪಾ–ಹಾಕಿಬಿಡು–ಇನ್ನೇನುಗತಿ–! — – ಅಯ್ಯೋ–ಅವ್ವಾ–ಅನ್ನಾ ಹಾಕೇ–ೀ–ೀ— – ಅನ್ನಾಹಾಕೋೀೀ; ಹೊಟ್ಟ್ಯಾಗ ಸಂಕಟಾಗ್ತೀ ದ— —

“ ಕೃಷ್ಣಕುಮಾರ ”

ನವಂಬರ ೧೯೨೯

# ರಾಯರ ಮದುವೆ



## ಪಾತ್ರಗಳು :

ರಾಯರು (ಇಲ್ಲವೆ ಹೆಸರಿಗೆ ಶ್ರೀಮಂತರು)..................ಒಬ್ಬ ಸುಖಪುರುಷ

ರಾಮಾಚಾರಿ ( ಊರಗುಡಿಯ ಪೂಜಾರಿ; ಒಕ್ಕಣ್ಣ.)..........ಈತನ ಹಿತಶತ್ರು

ಸುಬ್ಬಣಭಟ್ಟ (ಒಬ್ಬ ಉಂಡಾಡಿಗ ಉಪಾಧ್ಯಾಯ )..........ಇವರಿಬ್ಬರ ಮಿತ್ರ.

ಗುಂಡೇರಾಯ ( ಕೆರುಳುಹರುಕ ಗೃಹಸ್ಥನೊಬ್ಬ )..............ರಾಯರ ಬೀಗ.

ಶೇಷಾಚಾರಿ ( ಗೃಹಸ್ಥರಿಗೆ ಹತ್ತುವ ಜಿಗಳಿ).............ಈತನ ಪುರೋಹಿತ.

[ಅಲ್ಲದೆ ಇಬ್ಬರು ಸಿಪಾಯಿರು; ಬಂಡೆಪ್ಪ ಮುದ್ದೊ ಮೊದಲಾದ ಇಸ್ಪೀಟ ಕ್ಲಬ್ಬಿನ ಗೆಳೆಯರು.]

ಸ್ಥಳ:— ಧಾರವಾಡ ಜಿಲ್ಲೆಯ ಒಂದು ಹಳ್ಳಿ

ಕಾಲ:— ಇಂದಿನದೇ.

# ರಾಯರ ಮದುವೆ

( ಒಂದು ಚಿತ್ರ; ಅಲ್ಲ ತಸಬೀರು )

[ ಶ್ರೀಮಂತರೊಬ್ಬರು, ತಮ್ಮ ಮನೆಯ ಪಡಸಾಲೆಯಲ್ಲಿ ಶತಪಥ ಮಾಡುತ್ತಿದ್ದಾರೆ; ಚುಂಗಚ್ಚೆಹಾಕಿ ದೋತರ ಉಟ್ಟಿದ್ದಾರೆ. ಮೈಯಲ್ಲಿ ಒಂದು ಶರ್ಟು; ಎದೆಗೆ ಎರಡೇ ಗುಂಡಿಗಳು. ಕೈ ಗುಂಡಿಗಳು ಇಲ್ಲವೇ ಇಲ್ಲ. ಬಕ್ಕನೆತ್ತಿ. ಸಂಜಾಗಿ ಚಂಡಿಕೆಯ ಎಸಳುಗಳು ಹಾರಾಡುತ್ತಿವೆ. ಗೋಡೆಯ ಗೂಟಕ್ಕೆ ಅವರ ಹಳೇ ಜರದ ರುಮಾಲವೊಂದು; ತೂಗಹಾಕಿದ ಪಾರ್ಶೀ ಕರೇಕೋಟಿನ ಮೇಲೆ ಕುಳಿತುಕೊಂಡಿದೆ. ಒಂದು ಮೂಲೆಯಲ್ಲಿ ಸುರಳಿ ಸುತ್ತಿಟ್ಟ ಈಚಲ ಚಾಪೆ. ಅದರ ಬದಿಯಲ್ಲಿ ರಾಯರ ಶೇಪೆ ಹಚ್ಚಿದ ಬೆತ್ತದ ಹಿಡಿಕೆಯ ಹಳೆ ಕೊಡೆಯೊಂದು ಬಾಗಿಲ ಬಳಿಯಲ್ಲಿ ವಿಜಾಪುರದ ಮಚ್ಚೆಯ ಜೋಡುಗಳು. ಗೂಡಿನಲ್ಲಿ ಹಿತ್ತಾಳೀಯ ಎಲೆಯಡಿಕೆಯ ಡಬ್ಬಿ. ಅದರ ಬಳಿಯಲ್ಲಿ ಒಂದು ಅಡಕೊತ್ತು. ಅದರ ಮೇಲೆ ಎಲೆಯ ಸುರಳಿ. ರಾಯರ ಕೈಯಲ್ಲಿ ಒಂದು ಎಲೆಪಟ್ಟಿ. ಅದನ್ನು ದವಡೆಯಲ್ಲಿ ಸೇರಿಸಿಕೊಂಡು ಮೇಲೆ ಜರದಾ ಹಾಕಿಕೊಳ್ಳುತ್ತ ......................................... ]

ಅದೆಲ್ಲಾ ಖರೇಪಾ. ಆದರೇ ನನಗ ಈ ದಿವಸದಾಗ ಹೆಂಣು ಕೊಡುವ ಮಗಾ ಯ್ಯಾವ! ಆ ದೇಸಾಯರ ಭೀವ್ಯಾನ ಹೆಂಡತಿ ಸತ್ತು ಇನ್ನೂ ಎಂಟುದಿನ ಆಗಿಲ್ಲ. ಆಗಳೆ ನಿಶ್ಚಯು ಹಾಕಿದರಂತ. ನನ್ನ ಹೆಂಡತಿ ಸತ್ತು ಎರಡು ವರ್ಷ ಆಯಿತು—; ಇನ್ನೂ ಒಬ್ಬ ಸೂಳೇ ಮಗಾ ಏನು ಹೆಂಣು ಕೊಡತೇನಿ ಅಂತ ಬರವಲ್ಲಾ. ಈಗಿನ ದಿವಸ ದಾಗ 'ಕಾಸಿಗೊಂದು ಹೆಣ್ಣಂತ; ಕೊಸರಿಗೆರಡು ಹೆಣ್ಣಂತ' ಮಾತಿನ ಮುಂದ ಆಡತಾರ. ಆದರ ಎಲ್ಲಿವ ಹೆಂಣು. ಇಷ್ಟು ದಿವಸ ಹೆಂಣು ಹೆಂಣು ಅಂತ ಬಡಕೊಂಡು ಎದಿಯೆಲ್ಲ ಹುಂಣುಹುಂಣಾಗಿ ಹೋತು. ಒಂದು ಹೆಂಣೇನು ಹತ್ತರ ಹಾಯಲೊಲ್ಲವು. ಆಗಲ್ರೆಪಾ. ಒಂದು ಬಡ ವರ ಹುಡಿಗಿ; ಒಂದು ದಿಕ್ಕಿಲ್ಲದ ಹುಡುಗಿ; ಒಂದು ಅನಾಥ ಹುಡಿಗಿ; ಯಾವದೂ ಕೇಳಬೇಡಾ. ನಾನೂ ಈಗೆಲ್ಲಾ ಬಿಟ್ಟಬಿಟ್ಟೇನಿ ಏನ್ರೆಪಾ! ಎಂಥಾದರ ಆಗಲೀ. ಕಡೀಕೆ ಒಂದು ಕುಂಟೀ; ಒಂದು ಕುರಡೀ ಆದರೂ ಸಹಿತ ಏನೋ ಒಂದು ಧೊಡ್ಡ ಮನಸ್ಸು ಮಾಡಿ ಮದಿವಿ ಮಾಡಿಕೊಂಡೇನು ಅಂತೀನಿ. ಹಾಂಗಾದರ ಆ ಹುಡಿಗೀ ಉದ್ಧಾರ ಮಾಡಿದ ಹಾಂಗಾಯಿತು; ನಮಗೊಂದು ಹೆಂಡತಿ ಆದಹಾಂಗಾಯಿತು; ಅಂತಂತೀನಿ. ಕಡೀಕೆ ಮತ್ತೇನು, ಎಂಥಾದಾದರೂ ಒಂದು ಹೆಂಣು ಅಂಬೂದು ಸಿಕ್ಕರ ಸಾಕಪಾ ಅಂತೂ ನಮ್ಮ ಪಾಲಿಗೇ ಇಷ್ಟು. ತುಟ್ಟಿ ಯಾದವೇ ಹೆಂಣು! ಈಗಿನ ದಿವ್ಸದಾಗ ಎಲ್ಲಾ ಮಕ್ಕಳು ರುಡ್ಡ ನೋಡತಾರ— ದುಡ್ಡು. ಅಂತೂ ಇಲ್ಲಿಗೆ ಬಂದೇದ ಸ್ಥಿತಿ; ಏನೀ ಹೆಂಗಸರು ಇನ್ನಮ್ಯಾಲೆ ಗಂಡಸರಿಗೆ ಜಾಳ್ಗೀಮಾಡತಾರೋ ? ಏನು, ದುಡ್ಡಿಗೆ ಮಾಡತಾರೋ—ತಿಳಿಯೂದು. (ತಂಬಾಕು ಹಾಕಿಕೊಳ್ಳುತ್ತ) ನಾನೇ ಧಡ್ಡತನ ಮಾಡಿದೆ ಅನ್ನು. ಕೈಯಾಗ ಇದ್ದದ್ದೆಲ್ಲಾ ಕಳಕೊಂಡು ಹುಚ್ಚ

ಮುಂಗ ಆಗಿ ಕೂತೇನಿ. ಅಂದವ್ಯಾಲೆ ಮಂದಿ ಹೆಂಣು ಕೊಡು ಅಂದರೆ ಯಾಕ ಕೊಟ್ಟಾರು! ಅವಃನೋಡು. ನನ್ನ ಕೈಯಾಗೇ ನಾಕು ದುಡ್ಡು ಆಡತಿರಲಿ; ನಾ ಮುಂದ ನೀ ಮುಂದ ಅಂತ ಮುಗಿ ಬೀಳುತಿದ್ದವು ಹೆಂಣು. ಮೊದಲಿನ ಹಾಂಗ ದುಡ್ಡಿದ್ದಿದ್ದರ, ಹೆಂಣಿನ ಮಾಲೀ ಮಾಡಿ ಹಾಕ್ಕೋತಿದ್ದೆ. ಅಥವಾ ಹಾಂಗ ರೊಕ್ಕನೇ ಇದ್ದರ ಹೆಂಡರಾದರೂ ಯಾಕ ಬೇಕಾಗಿತ್ತು! ಆ ನಿಂಗಿ ನನ್ನ ಬಿಟ್ಟು ಮತ್ತೊಬ್ಬನ ಬೆನ್ನು ಹತ್ತಿ ಯಾಕ ಹೋಗತಿದ್ದಳು!! ನಿಂಗಿ ಬ್ಯಾಸರ ಬಂದಾಗ ಅಷ್ಟು ಮಜ್ಯಾಕ ಹುಬ್ಬಳ್ಳಿ ಧಾರವಾಡ ಕಡೆ ಒಂದು ಫೇರಿ ಹೊಡದು ಬಂದರ ಬೇಕಾದ್ಹಾಂಗ ಚೈನೀನ ಚೈನಿ. ಈಗೇನು? ಕೈಯಾಗ ಶುಂಠಿ; ಅಂತ ಎಲ್ಲಾ ಪಂಚೇತಿ. ಇದಕ ಏನಾರೇ ಒಂದು ಯುಕ್ತಿ ತಗೀಬೇಕು. ಎರಡು ವರ್ಷಾತೂ ನಾನೂ ಹಂಚಿಕಿ ಹಾಕೇ ಹಾಕ್ತೇನಿ; ಹಾಕೇ ಹಾಕ್ತೇನಿ. ಬಗೀನ ಹರೀವಲ್ಲದು! ಈಗಿನ ದಿವ್ಸ ದಾಗ ಬರೇ ಸಾದಾ–ಭೋಳೇತನ ಮಾಡಿಪ್ರ ಆಟ ಸಾಗೀತ? ಈ ಸರಳತನಯೇನು ಕೆಲಸಕ್ಕ ಬಾರದ್ದು. ಇದಕ ಏನಾದರೂ ಒಂದು ಸೋಗು ತಗೀ ಬೇಕು. ಇಲ್ಲದಿದ್ದರ ನಡೀಯೂ ಹಾಂಗಿಲ್ಲ. ಈಗ ನೀ ಒಂಮು ಸೋಗು ಮಾಡಿ ನೋಡು; ದುಡ್ಡು ಹಿರಿದು ಬೀಳತದ; ಹಾಂಗೇ ಬೇಡಲಿಕ್ಕೆ ಹೋಗು; ಯಾವ ಯಾವನೂ ದಮ್ಮಡಿ ದುಡ್ಡು ಕೊಡೂದುಲ್ಲಾ. ಸೋಗು ಹಾಕಬೇಕು ಸೋಗು. ಜಗತ್ತು ಮೋಸಾ ಮಾಡಿಸಿಕೊಂಡೇನೂ ಅಂತೇದ. ಈಗ ನೋಡು, ಹೀಂಗೇ ಒಂದು ಭಲೋ ಕೆಲಸಾ ಮಾಡತೇನಪಾ ಸಹಾಯ ಮಾಡಿರಿ ಅಂದರ ಹೋಗು ಹೋಗೊ ನಮ್ಮ ರೊಕ್ಕಯೇನು ಹಾದೀ ಮ್ಯಾಲ ಬಿದ್ದಿಲ್ಲಾ ಅಂತಾರ. ಆದರ, ಅದೇ ಮಕ್ಕಳು, ಒಂದ ನಾಟಕಾ ಅಂತ ಮಾಡಿರಿ, ಮೇಲ



೩— ೯೫೬೨

ಬಿದ್ದು ಬಂದು, ಒಂದಕ್ಕೆರಡು ರೊಕ್ಕಾ ಕೊಟ್ಟು, ಸೋಗಿನ ಸುಳ್ಳು ಮಾತು ಕೇಳಕೋತ ಬಾಯಿ ತಕ್ಕೊಂಡ ಕೂಡತಾರ. ಈ ಸೃಷ್ಟಿ ಅಂದರೇ ಹೀಂಗದೇ ! ಎಲ್ಲಾ ನಾಟಕ !! ಸೋಗು !!! ನಾನೂ ಅದಕ ಅಂತ ಹೇಳಿ, ಅದೇನೋ ಅಂತಾರಲ್ಲ ಅದೂ—ರಿಫಾರ್ಮರ—ಅಂತೇ, ಆ ಸೋಗು ತಗೀಬೇಕು ಅಂತ ಮಾಡಿದ್ದೆ. ನಾನೂ ಒಬ್ಬ ರಿಫಾರ್ಮರ ಆಗಿ ಬಿಟ್ಟಿರ, ಯಾವದಾರೇ ಒಂದು ಗಂಡಸತ್ತ ಹೆಂಣು ಸಿಗತಿತ್ತೋ ಏನೋ ! ಆದನ್ನಾದ್ರೂ ಆದರೇ ಏನು ಹೇಳಲಿ. ನಮ್ಮ ಬ್ರಾಹ್ಮಣರ ಜಾತಿ ಮಹಾ ಅರಿಷ್ಟ. ಗಂಡ ಸಾಯೂ ಪುರಸೊತ್ತಿಗಿಲ್ಲದ, ತಲೀ ಬೋಳಿಸಿಕೊಂಡೇ ಕೂಡತಾವ ಎಲ್ಲಾ ಹೆಂಣು. ಅದರೊಳಗ ಎಂಥೆಥಾ ಬೀಯೇ ಎಲೆಬ್ಬಿ ರಿಫಾರ್ಮರ ಸಹಿತ, ಹೆಂಣು ಸಿಗದ ಕಡೀಕ ಎಂಥಾ ದರೇ ಒಂದು ಗಂಟು ಹಾಕಿಕೊಂಡು ಕೂತದ್ದು ನಾನೇ ನೋಡೀನಿ. ಅಂದ ಮ್ಯಾಲೆ ಆ ಸೋಗೂ ಏನು ಕಡಿಪೂರೋಸುವ ಹಾಂಗ ಕಾಣ ಸೋದುಲ್ಲಾ. ಹಾಂಗಾದರ ಇನ್ನೇನಣಾ ಯುಕ್ತಿ ಹುಡಕಬೇಕೂ ! ( ಮತ್ತೊಮ್ಮೆ ತಂಬಾಕ ಬಾಯಲ್ಲಿ ಹಾಕಿಕೊಂಡು, ನುರಿಸುತ್ತ ಅತ್ತಿತ್ತ ಸುತ್ತುವನು ) ಇದಕೆಲ್ಲಾ ನಮ್ಮ ರಾಮಾಚಾರಿಯಾದರ ಸರಿ; ಆ ಒಕ್ಕಣ್ಣ ಶುಕ್ರಾಚಾರೀ ಹತ್ತರ ಒಂದೊಂದು ಘನಘನ ಯುಕ್ತಿ ಇರತಾವ. ದಿನಾ ಇಷ್ಟೊತ್ತಿಗೆ ಬರಾವಾ; ಇವತ್ತ ಯಾಕ ಬರವಲ್ಲನೋ ಅಂತೀನಿ. ( ಮತ್ತೆ ಸುತ್ತಾಡುವನು ) ಹಾ ! ಅಕಾ. ಅಂತೂ ಹೊತ್ತಿಗೆ ಬಂದೇ ಬಿಟ್ಟತಲ್ಲಾ ಅಸಾಮಿ.

[ ರಾಮಾಚಾರಿ, ತೆಳ್ಳಗೆ ಎತ್ತರವಾದವನು. ಸುಮಾರು ೫೦ ವರುಷ. ಗಡ್ಡಮೀಸೆ ಬೆಳ್ಳಗಾಗುತ್ತಲಿದೆ. ದಪ್ಪನ ಕಾಟಿಯ ಮೀಸೆ. ನಿಡಿದಾದ ಮೂಗು; ಆಳವಾದ ಕಣ್ಣುಗಳಲ್ಲೊಂದು ಕುರುಡು. ಹಣೆ ಅಗಲವಾಗಿ ಗೆರೆಗಳಿಂದ ತುಂಬಿದೆ. ಮೈಯಲ್ಲಿ

ಒಂದು ಬಂಡಿ. ಉಟ್ಟಿದ್ದು ಲಂಡ ಗೀರಂಚಿನ ಸೊಲ್ಲಾಪುರದ ದೋತರ. ಮೈಮೇಲೆ ಜೋಡಿಸಿದ ಹೊದ್ದುಕೊಳ್ಳುವ ದೋತರ. ತಲೆ ಬರಿದು. ಸಾಪಾಗಿ ಬೋಳಿಸಿದೆ. ದಪ್ಪವಾದ ಚಂಡಿಕೆ ಅಸ್ತವ್ಯಸ್ತವಾಗಿದೆ. ರಾಮಾಚಾರಿ ಪ್ರವೇಶಿಸುತ್ತ ——]

**ರಾಮಾಚಾರಿ:**—ನಮಸ್ಕಾರಪಾ, ಶ್ರೀಮಂತಾ

**ರಾಯರು:**—ಓಹೋ, ನಮೋನ್ನಮಹ. ಬಾರಪಾ. ಶುಕ್ರಾಚಾರಿ; ಯಾಕ ತಡಾ ಮಾಡಿದೀ ಇವತ್ತ ?

**ರಾಮಾಚಾರಿ:**—ಇವತ್ತೇನು—— ಸಂತಿ; ಗಂಜೀಪೀ ಆಡೂ ಹಾಂಗಿಲ್ಲಾ ಬಿಜೆಕ್ ಆಡೂ ಹಾಂಗಿಲ್ಲಾ.

**ರಾಯರು:**—ಆದರೇನಾಯಿತು; ಕಡೀಕೆ ಎಲಿಅಡಿಕಿ ಹಾಕ್ಕೊಂಡು ಹರಟೀ ಹೊಡಿಯೋದಪಾ ! ಹೂಂ, ಕೂಡಲಾ. ತಗೋ. (ಎಲೆಯಡಿಕೆ ಡಬ್ಬಿ ಎದುರಿಗೆ ಇಟ್ಟುಕೊಂಡು ಇಬ್ಬರೂ ಕೂಡುವರು. ರಾಯರು ಗೋಡೆಗೆ ಆತು ಕೊಂಡು ಕುಳಿತು, ಎಡಗೈಯಿಂದ ತಂಬಾಕು ಸಜ್ಜುಗೊಳಿಸಹತ್ತುವರು. ಆಚಾರಿ, ಎಲೆಯಡಿಕೆ ತಂಬಾಕು ಬಾಯಿಗೆ ಹಾಕಿಕೊಂಡು ಅಗಿಯುತ್ತ, ಮೊಳಕಾಲಿಗೂ ಬೆನ್ನಿಗೂ ಹೊರುವ ದೋತರ ಸುತ್ತಿಕೊಂಡು ಮೊಳಕ್ಕೆ ಮಡಿಚಿಕೊಂಡು ಕೂಡುವನು.)

**ಆಚಾರಿ:**—ಮತ್ತೇನ ಶ್ರೀಮಂತಾ; ಈ ಸರೆ ಜಾತ್ರೀ ರಂಗ ಹೊಡಸಿ ಬಿಡೋಣಪಾ ಮತ್ತ; ದೇವರ ಕೆಲಸ. ನಾಕುವರ್ಷ ಆತು. ಜಾತ್ರಿ ಹ್ಯಾಂಗ್ಹ್ಯಾಂಗ ಆಗಲಿಕ್ಕೆ ಹತ್ತೇದ. ಈ ಸರೆ ಮಾತ್ರ ಬಿಡೂ ಹಾಂಗಿಲ್ಲಾ.

**ರಾಯರು:**—ಇರಲಿ ಬಿಡಲೇ ಆಚಾರಿ. ಜಾತ್ರಿ ಅಂತೀ; ದೇವರ ಅಂತ. ದೇವರ ಹೆಸರ್ಲೆ ಭಲೊ ಬಕ್ಕರಸಲಿಕ್ಕೆ ಹತ್ತೀದಿ. ಸಾಕ ಬಿಡಲಾ ಇನ್ನೂ ಎಷ್ಟರ ದುಡ್ಡು ಮಾಡಬೇಕು ಅಂತೀದಿ.

**ಆಚಾರಿ:**— ಹೌದಪಾ ! ಅಲ್ಲಾ, ಶ್ರೀಮಂತಾ, ಈಗ ದೇವರ ಹೆಸರು ಹೇಳತೇನಂತ ಎರಡ ಸಂಸಾರಾ ನಡ್ಸತೇನಪಾ. ಇಲ್ಲದಿದ್ದರ ಯಾ ಮಂಗ್ಯಾನಮಗಾಯೇನು ಒಂದು ಒಡಕ ಕವಡಿ ಕೊಡೂದುಲ್ಲ ಕವಡೀ. ಹಾಂಗ ಇಲ್ಲದಿದ್ದರ ಹಿರೇಮಗನ ಮದವಿ ಹ್ಯಾಂಗ ಆಗ ತಿತ್ತು; ಎರಡು ಹೆಣ್ಣುಮಕ್ಕಳ ಮದಿವಿ ಹ್ಯಾಂಗ ಆಗತಿತ್ತು ?

**ರಾಯರು:**— ಅಂತೂ ಭಲೋ ಕಾಯಕಾ ನಡ್ಸೀ ನೋಡಪಾ ನೀ ಮಾತ್ರ ಆಚಾರಿ; ಆ ಎಲ್ಲೀ ಕೊಳ್ಳ್ಯಾಗ ಒಂದು ಟೀಕೀನೂ ಮಾಡ್ಸಿ ಹಾಕೀ ಅಲ್ಲಾ. ಅದೇನು ಯಾರಾದರೂ ದೇವರಿಗೆ ಮುಡುಪು ಕೊಟ್ಟ ದ್ದೇನು ?

**ಆಚಾರಿ:**—ಅಲ್ಲದ ಮತ್ತ್ಯೇ; ಆ ದೇಶಪಾಂಡೆ ರಾಮರಾಯರ ಹೆಂಡತಿ ಮಕ್ಕಳ ಬದಕಿದರ ಟೀಕಿ ಮಾಡಿಸಿ ಕೊಡತೇನಿ ಅಂತ ಬೇಡಿ ಕೊಂಡಿದ್ದಳಂತ. ಮನ್ನೆ ಹರಕಿ ಮುಟ್ಟಿಸಿ ಹೋದಳಲ್ಲಾ.

**ರಾಯರು:**—ಅದಕ್ಕೇ ಅಂದೆ. ಬರಾಬ್ಬರೀ ಆತು ನೋಡು. ನಾನೂ ಹೀಂಗ ಏನಾದರೂ ಇರಬೇಕು ಅಂತ ಎಣಕಿ ಹಾಕಿದ್ದೆ. ಅಂತೂ ಏನ ಈಗ ನಿನ್ನ ಕೈಯೇನು ಯಾರು ಹಿಡಿದವರಿಲ್ಲ ಬಿಡಪಾ. ಆ ಎಲ್ಲೀ ಯಮಕರೀ ಏನ ಹೇಳಬೇಕಪಾ.

**ಆಚಾರಿ:**—ಮತ್ತೇನಪಾ ಶ್ರೀಮಂತಾ; ಹೀಂಗೇ ಏನಾರೇ ಯುಕ್ತಿ ಮಾಡಬೇಕಲ್ಲಾ; ಇಲ್ಲದಿದ್ದರ ಆ ಎಲ್ಲಿ ಇಲ್ಲ್ಯಾಕ ಇರತಿದ್ದಳು, ನನ್ನ ಹತ್ತೀಲೆ ? ಮತ್ತೆಲ್ಲಿಯಾರ ಯಾವನ್ನಾರ ಬೆನ್ನ ಹಚ್ಚಿಕೊಂಡು ಹೋಗ ತಿದ್ದಳು. ಈಗ ಹೋಗಿಲ್ಲೇ ನಿನ್ನ ನಿಂಗಿ; ಅದ್ಯಾಕಪಾ ? ನೀ ಯೇನು ಕೊಡದ್ಹಾಂಗಾದೀ !

ರಾಯರು:—ಅದೇ ನೋಡಪಾ ಸಂಕಟ ಬಂದಿರೂದು, ಇತ್ತ ಲ್ಯಾಗ ಹೆಂಡತೀನು ಸತ್ತುಹೋತು. ಅತ್ತಲಾಗ ಆ ಸೂಳೀಮಗಳೂ ಕೈಬಿಟ್ಟಳು.

ಆಚಾರಿ:—ಅದಕ್ಯಾಕ ಇಷ್ಟು ಚಿಂತೀ ಮಾಡಿತೀದಿ. ಮತ್ತ ಯಾವಾಕೀನ್ನರೇ ಹೆಪ್ಪೀ ಹಾಕಿದರಾತಪಾ.

ರಾಯರು:—ಅಂಥಾವು ಭಾಳ ದಿನಾ ತಡೀಯುದುಲ್ಲೋ.

ಆಚಾರಿ:—ಭಾಳ ದಿನಾ ತಡೀದಿದ್ದರ ನಿಮ್ಮಪ್ಪನ ಗಂಟ ಏನು ಹೋದ್ದು ಒಂದು ಹೋದರ ಮತ್ತೊಂದು. ವ್ಯಾಲಿಂದ ವ್ಯಾಲ ಬದ್ಲಾಗತಿದ್ದರೇ ಬೇಕಪಾ. (ಮತ್ತೊಮ್ಮೆ ತಂಬಾಕ ಎಡದ ಅಂಗೈಯಲ್ಲಿ ಸಜ್ಜುಗೊಳಿಸುತ್ತ ಏಳುವ ಗಡಿಬಿಡಿ ತೋರಿಸುವನು)

ರಾಯರು:—ಯಾಕಪಾ ಇಷ್ಟ ಅವಸರಾ ಆಚಾರಿ? ಎಲ್ಲೀ ನಿನ ಪಾದ ಕೂಡಲೇ ಜೀವ ಚುರುಚುರು ಅನ್ನಲಿಕ್ಕೆ ಹತ್ತೇನು? ಕೂಡಲಾ, ಅಷ್ಟು ಇದೇಗ ಚಹಾ ಮಾಡತೇನಿ; ತಗೊಂಡ ಹೋಗು.

ಆಚಾರಿ:—ಹಾಂಗೇನಿಲ್ಲ. ಆ ಕುಲಕರ್ಣಿ ತಮ್ಮಾಕ್ಕ ಒಂದು ಗಂಟ ಬಿದ್ದಾನಪಾ. ಅವತ್ತ ನಾ ಗದಿಗ್ಗೆ ಹೋದಾಗ ಆ ಈರ್‍ಯಾನೂ ಪ್ಯಾಟಿ ಬಸ್ಯಾನೂ ಜಗಳಾಡಿದರಂತಲ್ಲಾ ಆ ಹೊಲೀರ ದುರಗೀ ಕಾಲಾಗ. ಅದರ ದಸಿಂದ ನನಗ ಸಾಕ್ಷೀ ಹೇಳು ಅಂತ ಗಂಟ ಬಿದ್ದಾನಪಾ ಕುಲಕರ್ಣೀ.

ರಾಯರು:—ಹಾಂಗಾರ ಆಚಾರಿಗೆ ಮತ್ತೊಂದು ದಕ್ಷಿಣೀ ಮೂಹೂರ್ತ ಬಂದೇದಲ್ಲಾ. ಅಂತೂ ನೀ ನೋಡಪಾ, ಬಲುಬೆಕ್ಕೋರ್ ಶುಕ್ರಾಚಾರೀ. ಎಲ್ಲಾದರೂ ಏನಾದ್ರೂ ಇಂಥಾವೇ ಹುಡಕಿರತೀ.

**ಆಚಾರಿ:**—ಮತ್ತದಕ್ಕೇ ಹೇಳಿದ್ನೆಲ್ಲಪಾ, ಎರಡು ಸಂಸಾರದ ಹೊರಿ ಮೈಮ್ಯಾಲೆ ಅಂತ. ಬರೇ ದೇವರು ಅಂತ ಕೂತರ, ಆ ಕಲ್ಲು ದೇವ ರೆಷ್ಟು ಕೊಟ್ಟೇತು? ಅತ್ತಲಾಗ ದೇವರ ಹೆಸರ್ಲೆ ಬಂದಷ್ಟೂ ಜಗ್ಗ ಬೇಕು. ಇತ್ತಲಾಗ ಬ್ಯಾರೇ ಯುಕ್ತಿನೂ ಹುಡುಕಬೇಕು. ಜಗತ್ತು ನಿಂತದ್ದು ದುಡ್ಡಿನ ಮ್ಯಾಲಪಾ, ಶ್ರೀಮಂತಾ. ಅದಕ್ಕೇ ನಾ ಒಂದು ಹಂಚಿಕೀ ಹುಡಕೇನಿ. ಈ ರೂಪಾಯದ ಮ್ಯಾಲ ರಾಜಾನ ಮೋರೀ ಹಾಕಿರ್ತಾರ ನೋಡು ಪಂಚಮ ಜಾರ್ಜನ್ನು! ಇನ್ನ ಮ್ಯಾಲ ರಾಜಾನ ಮೋರೀ ಹಾಕದ, ಕೂರ್ಮನ ಚಿನ್ಹಾ ಹಾಕಬೇಕು ನೋಡು. ಯಾಕಂದ್ರೇ. ಈ ಜಗತ್ತೆಲ್ಲ ಕೂರ್ಮನ ಮ್ಯಾಲ ನಿಂತೇದ ಅಂಬೂ ದುಲ್ಲೇ ಪುರಾಣದಾಗ. ಆದರ, ಖರೇ ಅಂದ್ರು ದುಡ್ಡಿನ ಮೇಲೆ ನಿಂತದ ಜಗತ್ತು.

**ರಾಯರು:**—ಬಲು ಯುಕ್ತ್ಯೋ ನಿನ್ನವು ಆಚಾರೀ. ಆಗಲಿ ಬಿಡು. ಒಂದಿಷ್ಟು ಚಹಾ ತಗೊಂಡ ಹೋಗೀಯಂತ ನಿಂದ್ರು.

**ಆಚಾರಿ:**—ಈಗೇನ ಮಾಡ್ತೀ ಬಿಡಪಾ. ಮತ್ತೇನು ನೀನೇ ಮಾಡಬೇಕು ಹೌದಲ್ಲೊ?

**ರಾಯರು:**—ಮತ್ಯಾರಪಾ ಮಾಡವ್ರು, ನನ್ನ ಹೊರತು! ಹೆಂಡತೀ? ಮಕ್ಕಳೇ?

**ಆಚಾರಿ:**—ನಾ ನೋಡಲಾರೆನೋ ಶ್ರೀಮಂತಾ ನಿನ್ನ ಗೋಳಾಟಾ. ಗಂಡಸಾಗಿ ನೀನೇ ಕೈ ಸುಟ್ಟಕೊಂಬುದು ಮಾತ್ರ ನೋಡಲಾರೆ ನೋಡು. ಒಂದ ಮದ್ವಿ ಮಾಡಿಕೊಂಡು ಬಿಡೋ ಹೋಗಲಿ—, ಅಂದರ ಒಲ್ಲೆ ಒಲ್ಲೆ ಅಂತ ಇಲ್ಲದ ಜಂಭಾನೇ ಬಡೀತೀ ಅಪಾ. ಇನ್ನೂ ಎಷ್ಟು ದಿವಸ ನಡ್ಸಬೇಕಂತೀ ಈ ಸೋಗು. ಇಲ್ಲೋಡಪಾ

ಶ್ರೀಮಂತಾ, — ನಾ ನಿನ್ನ ಮುಂದ ಒಂದ ಖಚಿತ ಮಾತು ಹೇಳ ತೀನಿ. ಇನ್ನ ಮ್ಯಾಲೆ ನಾವೇನು ಪುರುಷಪಾಕ ತಗೊಂಬವರಲ್ಲಾ. ಚಿಟ್ಟಿ ಅಂದು ಹೋಗೇದ ತಲಿಯೆಲ್ಲಾ ನಿನ್ನ ಕೈಲೆ ಚಹಾ ಕುಡದು ಕುಡದು. ಇನ್ನ ಮ್ಯಾಲಾದರೂ ನೀ ಏನಾರೇ ಮದ್ವೀ ಮಾಡಿ ಕೊಂಡು ಇರತೀನಂದೀ, ಭಲೋ ಆತು. ಇಲ್ಲದಿದ್ದರ ನಮ್ಮ ಕಂಪೂದ ಮಂದಿಗೆಲ್ಲಾ ಹೇಳಿ ಬಿಡತೇನಿ. ನಿನಗ ಬಹಿಷ್ಕಾರ ಹಾಕೇ ಬಿಡತೇವಿ.

**ರಾಯರು:**—ಆಗಲೆಪಾ, ಆಚಾರಿ. ನೀ ಇಷ್ಟು ಹೇಳತೀ ಅಂದ ಮ್ಯಾಲೆ ನಾನೂ ಒಪ್ಪಿಕೋತೇನಿ. ಒಂದು ಹೆಣರೇ ಗಂಟು ಹಾಕಿ ಕೊಡು. ಆಗಿ ಹೋಗ್ಲಿ. ಮತ್ತೇನು, ಈಗಾದ್ರೂ ಖುಶೀನ ?

**ಆಚಾರಿ:**—ಬಾರಪಾ, ಹಾಂಗ ಹಾದಿಗೆ. ನಿನ್ನ ಮನಸಿನಾಗೂ ಎಲ್ಲಾ ಅದೇ ಮದವಿ ಮಾಡಿಕೊಬೇಕು ಅಂತ, ಆವರ ಬರೇ ಢೋಂಗ ಮಾಡತೀದಿ ಆತು. ನಾ ಬಲ್ನೋ. ನಿಮ್ಮಂಥವರು ಎಲ್ಲಾ ಮದ್ವೀ ಒಲ್ಲೆ ಅಂತ ಅಂದ್ರ ಪ್ರಪಂಚಾ ಮುಂದ ಸಾಗಬೇಕು ಹ್ಯಾಂಗ ! ಈ ಬ್ರಹ್ಮಾಂಡಾ ಇವತ್ತೇ ನಿಂತು ಹೋದೀತು !!

**ರಾಯರು:**—ಅಂತೂ ಮಂದೀ ಮನಸು ಕಂಡ ಹಿಡೀಲಿಕ್ಕೆ ನೀನೇ ಹಿರದು ನೋಡಪಾ ಶುಕ್ರಾಚಾರಿ. ಆದರ ಒಂದು ಹೆಣ್ಣ ಮಾತ್ರ ನೋಡಬೇಕಲ್ಲಾ.

**ಆಚಾರಿ:**—(ಎದ್ದು ಹೊರಡುತ್ತ) ಅದರ ಕಾಳಜಿ ಬಿಡೋ ನಿನ್ನ ಮಂಜಾಳ ಹೋಗಲೀ. ಅಷ್ಟ್ಯಾಕ ಎದಿಬಾಯಿ ಬಿಡತೀ; ನಾಯಿದ್ದ ಮ್ಯಾಲೆ ನಿನಗ್ಯಾಕಣಾ ಚಿಂತಿ ?

**ರಾಯರು:**—ಹಾಂಗಾದ್ರ ಹೋಗತೀಯಾ ? ಮತ್ತ ನಾಳಿರ ಗಂಜೀಪಿಗೆ ಬರ್ರೀ ಇಲ್ಲೋ. ತಪ್ಪಸಬ್ಯಾಡಪಾ, ನಾರಾಯಣಾ. ನೀ ಇರದಿದ್ದರ ಆಟಕ್ಕ ರಂಗೇ ಬರೂದುಲ್ಲ ನೋಡು. ಆದರ ನನ್ಮಾತು ಮಾತ್ರ ಮರೀಬ್ಯಾಡಾ.

**ಆಚಾರಿ:**—ಅದರ ಕಾಳಜೀ ಬಿಟ್ಟ ಚಿಂತೀ ಹಿಡೀ ನೀ.

**ರಾಯರು:**—ಹಾಂಗಲ್ಲಪಾ, ಮಗನೇ. ಆ ಎಲ್ಲೀ ಮನ್ಯಾಗ ಹೋಗಿ ಕೂತೆಂದರ ಎಲ್ಲಾ ಮರತೇ ಬಿಡತೀಯಪಾ ನೀನು. ಅದಕ ನನಗಿಷ್ಟು ಎದೆಗುದಿ. ಅಂತ್ಹೇಳಿ ಮತ್ತೊಮ್ಮೆ ಎಚ್ಚರಾ ಕೊಟ್ಟರತೇನಿ

**ಆಚಾರಿ:**—ಎಲಾ ಇವನೇ-ಎಂಥಾ ಮನಸ್ಯಾನೋ ನೀ ! ನಾನೂ, ಆ ಎಲ್ಲೀ ಸಾಲ್ಯಾಗ ದಿನಾ ಕಲೀತಿರೊ ಪಾಠಾನೇ ಅದೂ-ಪ್ರತಿನಿತ್ಯದ ಮದಿವಿ. ಅಂಥಾದು ನಿನ್ನ ಮಾತು ಮರತೇನೇ ? ಅದರೊಳಗ ನೀ ಅಂದ್ರ ನಮಗ ಗಳಸ್ಯ ಕಂಠಸ್ಯ (ತನ್ನೊಳಗೆ) ಗಳಸ್ಯ ಉರಲಸ್ಯ—— ಆಗಲಿ ಬರತೇನಿ ಹಾಂಗಾರ. ( ಹೋಗುವನು )

**ರಾಯರು:**—ಈ ಲುಚ್ಚಾ ಸೂಳೀಮಗನ ಮಾತು ನಂಬಿ ಕೊಂಡಲ್ಲೀ ಈಗೆಲ್ಲಾ ರಾಮರಕ್ಷಿಯಾಗಿ ಕೂತೇದ ಮನ್ಯಾಗ !-ಅಂತೂ ಮಗಾ ನೆಟ್ಟಗ ತಲೀ ಬೋಳಿಸಿದಾ ನಮ್ಮದು. ಇದರಗಷ್ಟಾನೇ ಮಾಡಿಬಿಟ್ಟಾ. ( ಅತ್ತಿತ್ತ ತಿರುಗಾಡಿ ) ಆದರೂ ಮತ್ತ, ಏನಾರೇ ಹಿಕ್ಮತ್ತು ಮಾಡಿದ್ರೇ, ಅವನೇ ಮಾಡಬೇಕು. ನೋಡೋಣ, ನೋಡೋಣ, ಈ ಸಾರಿ ಏನೇನು ಮಾಡತಾನೋ—

( ಮತ್ತೆ ಸುತ್ತಾಡುತ್ತಿರುವನು; ತೆರೆಬೀಳುವದು )

## ೨ನೇ ನೋಟ: ರಾಮಾಚಾರಿ

[ ಮರುದಿನ ಬೆಳಗು ಮುಂಜಾನೆ. ಒಂದು ಬೀದಿ. ರಾಮಾಚಾರಿ, ಎಡಗೈಯಲ್ಲಿ ಚಂಬಿಗೆ ಹಿಡಿದುಕೊಂಡು, ಕಿವಿಗೆ ಜನಿವಾರ ಹಾಕಿಕೊಂಡು ಬರುವನು. ಉಟ್ಟದ್ದು ಲುಂಡ ಪಂಜಿ. ಮೈಯೆಲ್ಲ ಬರಿದು. ತಲೆಗೆ ಇನ್ನೊಂದು ಪಂಜೆ ಸುತ್ತಿಯದೆ. ಜನಿವಾರಕ್ಕೊಂದು ಉಂಗುರ ಜೋತಾಡುತ್ತದೆ. ಕಾಲಲ್ಲಿ ಮೆಟ್ಟುಗಳಿವೆ. ಬಲಗೈಯಲ್ಲಿ ಒಂದು ಚಿಕ್ಕ ಗಂಟು. ಅತ್ತಲಿಂದ ಸುಬ್ಬಣ್ಣ ಭಟ್ಟರು ಬರುತ್ತಾರೆ; ಸಾದಾ ದೋತರ ಕೋಟು ಅಂಗಿ ಟೊಪ್ಪಿಗೆಯ ಉಡುಪು. ಕೈಯಲ್ಲಿ ಚಂಚಿ. ಈತ ಸ್ವಲ್ಪ ಕುಂಟ; ತುಸು ಉಗ್ರ. ]

**ರಾಮಾಚಾರಿ**:—ಮತ್ತೇನು ಸುಬ್ಬಣ್ಣ ಭಟ್ಟರೇ ಎದ್ದಿರಾ?

**ಸುಬ್ಬಣ್ಣ**:—ಓಹೋ ರಾಮಾಚಾರರೇ—ಎದ್ದೆವಿ; ಎದ್ದಿರಾ? ಮತ್ತೇನು, ಎತ್ಲಾಗ ಹಳ್ಳದ ಕಡೆಹೋಗಿದ್ದಿರೇನು?

**ರಾಮಾಚಾರಿ**:—ಹೂನಪಾ. ಪ್ರಾತಃಕೃತ್ಯಾ ಒಂದು ಬಿಟ್ಟದ್ದಲ್ಲಲ್ಲಾ! ಒಂದು ಹೊಟ್ಟೇದಸಿಂದ ಎಲ್ಲಾ ಪ್ರಪಂಚಾನೇ ಹತ್ತೇದ ಬೆನ್ನು! ಬೈಲುಕಡೆ ಹೋಗೋದು ಹಿಡಕೊಂಡು, ಹೆಂಡರು ಮಕ್ಕಳು ಮನೀಮಾರು ಎಲ್ಲಾ ಆ ಕನಕದಾಸರು ಹೇಳಿಧಾಂಗ ಒಂದು ಗೇಣು ಹೊಟ್ಟೇದಶಿಂದನೇ ನೋಡಪಾ. ಹೌದಂತಿಯೋ ಅಲ್ಲ ಅಂತಿಯೋ!

**ಸುಬ್ಬಣ್ಣ**:—ವಾಜಮೀ ಮಾತರೀ ರಾಮಾಚಾರರೇ—

**ರಾಮಾಚಾರಿ**:—ಈ ಖೋಡಿ ಹೊಟ್ಟೇದಸಿಂದ, ಒಂದ ಮಾಡಬೇಕ ಎರಡ ಮಾಡಬೇಕೇ—, ಒಂದು ಪ್ರತಿಸೃಷ್ಟೀನ ಹುಟ್ಟಿಸ ಬೇಕಾಗ್ತದ ಮನಸ್ಸ್ಯಾ ಅಂಬಾವ. ಎಷ್ಟ ಖಟಾಟೋಪಾ; ಎಷ್ಟ ಗೋಳಾಟಾ—ಆ.

**ಸುಬ್ಬಣ್ಣ**:— ರಾಮಾಚಾರೇ — ನಿಮ್ಮಂಥಾ ಅನುಭವಿಕರು, ನಿಮ್ಮಂಥಾ ಜ್ಞಾನಿಗಳು ಕೂತಕೊಂಡು ಹೀಂಗ ಇಷ್ಟು ಗೋಳಾಡ ತೀರಿ ಅಂದ್ಮ್ಯಾಲೆ ನಮ್ಮಂಥ ಹುಡುಗರ ಅವಸ್ಥೆಯೇನು ? ನಾವು ಹ್ಯಾಂಗಾರ ಬಾಳಿವಿ ಮಾಡ್ತಿದ್ದೇವಾದಿತು !

**ರಾಮಾಚಾರಿ**·— ಈಗೇ ಕೈಕಾಲು ಬಿಡಬ್ಯಾಡಪಾ ಹುಡುಗಾ. ಇನ್ನೂ ನಿನಗ ತಲೀಗೆ ಬಡೀತೆಂದರೆ ಹೆಚ್ಚು ಬುದ್ಧಿ ಬರತೇದ. ನನಗ ನೋಡು ಈಗ ಅರ್ಧ ದಿವಸ ಆಗಿ ಹೋದವು. ಹದಿನಾಲ್ಕು ಮಕ್ಕ ಳಾದವಪಾ. ಹೆಂಣು ಗಂಡು ಇದ್ದದ್ದವು ಸತ್ತದ್ದವು ಕೂಡಿ. ಈಗ ಮತ್ತ ಹೆಂಡತಿಗೆ ಎಂಟರಾಗ. ಈ ಹೆಂಡತೇರು ಹೀಂಗ ಹಡೀತಾ ಹೋದರ ನಾವರ ಎಷ್ಟು ಅಂತ ಈಡ ಮಾಡಬೇಕಪಾ ಅಂತೀನಿ.

**ಸುಬ್ಬಣ್ಣ**:— ಅಂತೂ ನೀವು ಎರಡೇಳು ಮಕ್ಕಳ ತಂದಿ ಅನ್ನ ರೆಲ್ಲಾ. ಇವೆಲ್ಲಾ ಬರೇ ನಿಮ್ಮ ಸ್ವಂತ ಮಕ್ಕಳೂ——

**ರಾಮಾಚಾರಿ**:— ಸ್ವಂತ ಮಕ್ಕಳೇಪಾ — ಇನ್ನಾ — ಬಿಟ್ಟೇ ಮಕ್ಕಳ ಲೆಕ್ಕಾ ಎಲ್ಲಿ ಇಟುಕೋತ ಕೂಡಲಿ. ಎಷ್ಟಾದುವೋ ಎಷ್ಟು ಹೋದವೋ. ಇನ್ನ — ಬರೇ ನನ್ನ ಸಂಸಾರದ ಗೋಳಂತೀಯಾ? ನಮ್ಮ ಕೆಟ್ಟ ಜೀವಾ, ಮಂದೀ ದಸಿಂದ ಸಹಿತ ಗೋಳಾಡಬೇಕು. ಈಗ ನಮ್ಮ ಶ್ರೀಮಂತನ್ದು ಮದವೀ ಒಂದು ಮಾಡಬೇಕಾಗೇದ.

**ಸುಬ್ಬಣ್ಣ**:— ಅಂತೂ ಮತ್ತೊಂದು ಪರೋಪಕಾರಕ್ಕ ಕೈ ಹಾಕೀ ರಲ್ಲ ಆಚಾರು ! ಸಾಕು ಬಿಡ್ರಪಾ ಮಹಾರಾಯರ. ಈಗ ಅವನ ಅವಸ್ಥೆ ಇಷ್ಟು ಮಾಡೀರಿ. ಅಷ್ಟೇ ಸಾಕು. ಪಾಪ ! ಈಗ ಅವಗ ಹೊಟ್ಟಿ ಬಟ್ಟೇ ಸಾಗಿಸ ಬೇಕಾದ್ರ ಸಾಕುಸಾಕಾಗೇದ. ಇನ್ನ ಹೆಂಡ್ತಿನ್ನ ಎಲ್ಲಿ ಗಂಟಹಾಕಿಕೊಂಡಾನು ?

**ರಾಮಾಚಾರಿ:**—ಅದ್ಯಾಕ?—ನಾ ಇಷ್ಟಕ್ಕs ಬಿಡತೇನಿ ಏನ್ ಅವನ್ನ?? ಆ ಸೂಳೀಮಗನ್ನ ಏಳು ಕೆರಿ ನೀರು ಕುಡಿಸಿ ಗಲ್ಲಗಲ್ಲ ಬಡಕೊಳ್ಳಿಕ್ಕೆ ಹಚ್ಚತೇನಿ. ಈ ರಾಮಾಚಾರೀ ತುತ್ತಿಗೆ ಆಶಾ ಮಾಡಿ ದವರ ಗತಿ ಏನಾಗತದ ಅಂತ ತೋರಿಸೇ ಬಿಡತೇನಿ.

**ಸುಬ್ಬಣ್ಣ:**— ರಾಮಾಚಾರ್ರ, ಆ ನಿಂಗೀ ಕಾಲಾಗ ಹಾವದಲ್ಲೋ ಇಷ್ಟು ನಿಮ್ಮದೂ ಅವರ್ದೂ ವರ್ರಾ. ಹೋಗಲಿ ಬಿಡ್ರಿ. ಅವಳೇ ಓಡಿ ಹೋಗ್ಯಾಳಲ್ಲಾ ಅವನ ಬಿಟ್ಟು.

**ರಾಮಾಚಾರಿ:**— ಆ ಹಿಕ್ಮತ್ತು ಮಾಡಿದ ಮಗಾಅರ ಯಾರವ ಈ ರಾಮಾಚಾರೀ ಹೊರ್ತು. ಈಗ ಆ ನಿಂಗಿ ಯಾರ ಹತ್ತರ ಇದ್ದಾಳಂತ ತಿಳಿದಿ ! ಈ ರಾಮಾಚಾರಿ ಅಂದರ ಹಾಂಗಹಾಂಗ ತಿಳಿ ದೀರಿ ನೀವೆಲ್ಲಾ. ಈಗ್ಯಾಕ ಹೇಳ್ಲಿ.—ಮತ್ಯಾರ ಮುಂದೂ ಸುದ್ದಿ ಒಡೀ ಬ್ಯಾಡಪಾ ಮತ್ತ. ನೀ ನಮ್ಮಾವಾ ಅಂತ ನಿನ್ನ ಮುಂದ ಹೇಳೀನಿ.

**ಸುಬ್ಬಣ್ಣ:**— ( ಕೈ ಕೈ ಚಪ್ಪರಿಸುತ್ತ ) ನನ್ನ ಮ್ಯಾಲೆ ವಿಶ್ವಾಸ ಅದನೋ ಇಲ್ಲೋ ರಾಮಾಚಾರ್ರ? —ಅಂದ ಮ್ಯಾಲ ತೀರಿತ್ರಿಪಾ— ಹಾಂಗಾರ ಏನು ನಿಂಗಿ ನಿಮಗ ಸಾಮೀಲಾಗ್ಯಾಳೇನ ಮತ್ತ. ಅಂತು ಹಿಡತಾ ಭಲೋ ಹಾಕಿದ್ರಿಪಾ.

**ರಾಮಾಚಾರಿ:**—ಮತ್ತ ಕೈಯಾರದೊ ಸುಬ್ಬ್ಯಾ—ನಾ ಏನ ಹೇಳ ಲೆಪಾ. ಹುಡುಗೀ ಇನ್ನ ಮ್ಯಾಲೆ ಅಸಿಮಿಸಿ ಅಂಬೂಹಾಂಗಿಲ್ಲಾ. ಹಾಂಗ ಹಾಕೇನಿ ಒಂಟೇ ಹಿಡತಾ. ಆದರ ಇನ್ನೂ ಆ ಶ್ರೀಮಂತನ್ನೊಂದು ಕೆಬ್ಬೈಕೆಲಬ್ಬೈ ಅನಸೂ ತನಕಾ ನನಗೇನು ಸಮಾಧಾನ ಇಲ್ಲ ನೋಡು. ನನ್ನ ತುತ್ತಪಾ ನಿಂಗಿ; ಅದಕ್ಕ ಅವಾ ಕೈ ಹಚ್ಚಿದಾ. ಆಗಲಿ,

ಮಾಡತೇನಿ ನಿಂದರು ಅವನ ಪುಟ್ಟಾಪೂರಾ: ಫಜೀತಿ. ಆದರ್ನೀನಿ ಮಾತ್ರ ಸಾಮೀಲಾಗಿರಬೇಕು ಮತ್ತ. ತಿಳೀತಿಲ್ಲೊ.

**ಸುಬ್ಬಣ್ಣ:—** ಅದಕ ನನ್ನ ಮಾತು ಖಚೀತ ಅಂತ ಹಿಡೀರಿ, ನೀವ್ರು. ಆ ಶ್ರೀಮಂತನಿಂದ ನಮಗ ಏರಗಟ್ಟಿದ್ದಾರೇ ಏನು. ನೀವ್ರ ಇದ್ರು ನಮಗೆಲ್ಲಾ ಇದ್ದ್ಹಾಂಗ ಅನ್ನಿರಿ. ಹೌದೊ. ಅಲ್ಲೊ.

**ರಾಮಾಚಾರಿ:—** ಅದರ ಕಾಳಜೀ ಬಿಡಪಾ ಸುಬ್ಬ್ಯಾ—ಈಗ ಮತ್ತ ನರಗುಂದ ಹಾದೀ ಜಕಾತಿ ಕಟ್ಟೋ ಕೆಲಸ ಬಂದೇದ; ಹಚ್ಚಿಸಿ ಕೊಡ್ಲೇನು ? ಅಥವಾ ಈಗ್ಯಾಕ ಮುಂದ ನೋಡೋಣಂತ. ಆದಕೂ ಬಲಾ ಅನ್ನ ನೌಕರೀ ಸಿಗೂಹಾಂಗ ಮಾಡೇನಂತ.

**ಸುಬ್ಬಣ್ಣ:—** ರಾಮಾಚಾರ, ನೀವು ನಂಮು ದಸಿಂದ ಏನಾದ್ರೂ ಖಟಪಿಟ ಮಾಡ್ತೀರಿ ಅಂತ ನಮಗ ಖಾತ್ರಿ ಅದೇನ ಬಿಡಿರಿ.

**ರಾಮಾಚಾರಿ:—** ಹಾಂಗಾರ ಈಗ ಮಾತ್ರ ನನ್ನ ಕೆಲಸಕ್ಕ ಅನುಕೂಲಾಗು. ಆ ಶ್ರೀಮಂತನ್ನೊಂದು ತೊಬೋ ತೋಬೋ ಅನಿಸಿ ಬಿಡೋಣ.

**ಸುಬ್ಬಣ್ಣ:—** ಆಚಾರೀ, ನೀವ್ಹೇಳಿಧಾಂಗ ನೋಡ್ರೆಪಾ.

**ರಾಮಾಚಾರಿ:—** ಹೌದಲ್ಲೊ. ಘಟ್ಟೀ ಹಾಂಗಾರ. ಮತ್ತೀಗ ಎತ್ಲಾಗ ಹೊಂಟೆಪಾ ! ಬಿಸಿಲು ಏರಲಿಕ್ಕೆ ಬಂತು.

**ಸುಬ್ಬಣ್ಣ:—** ದೇಸಾಯರ ಬಿಟ್ರೆಪಾ. ಅವರ ಹುಣಸೀಗಿಡದ ಹೊಲದಾಗ ಹೊಸದಾಗಿ ಒಡ್ಡು ಹಾಕಿಸಲಿಕ್ಕೆ ಹತ್ಯಾರ. ಅಷ್ಟು ದೇಖರೇಖೀ ಮಾಡಬೇಕಾಗೇದ. ದುಡ್ಡುವುಳ್ಳವರ ಮಾತೂ, ಅಷ್ಟ ಮರ್ಜಿ ಹಿಡೀಬೇಕಲ್ಲಾ.

**ರಾಮಾಚಾರಿ:—** ಆಗಲಿ ಹೋಗು ಹಾಂಗಾರ; ಮತ್ತ ಮಧ್ಯಾಹ್ನಕ್ಕ ಬಿಜೆಕ್ಕಿಗೆ ಬರತೀವಲ್ಲ್ಯೋ ?

**ಸುಬ್ಬಣ್ಣ:—** ಬರದೇ ಹ್ಯಾಂಗರೀ. ಏನ ತಪ್ಪಿಸಿದರೂ ಅದನ್ನ ತಪ್ಪಸೂ ಹಾಂಗಿಲ್ಲ.

**ರಾಮಾಚಾರಿ:—** ಬಾ ಮತ್ತ ಮರೀಬ್ಯಾಡಾ. ಈಗೇನಪಾ ಅಂತಂದ್ರ, ನಾನು ಆ ಶ್ರೀಮಂತನ್ನ ಮದಿವೆಗೆ ಒಪ್ಪಿಸೇನಿ. ಅವನ ಮನಸಿನಾಗೂ ಇತ್ತೂ ಅನ್ನು. ಮಧ್ಯಾಹ್ನದಾಗ ನಮ್ಮ ಕಂಪೂ ಕೂಡಿತು ಅಂದ್ರ ನಾ ಮತ್ತ ಆ ಮಾತು ತಗೀತೇನಿ. ನೀನೂ ಅವನ್ನ ಉಬ್ಬಿಸಿ ಬಿಡು. ಏನಾರ ಒಂದ ಭುಲತಾಪಿ ತುಂಬಿ, ಅಂತೂ ಅವನ ಮಡ್ಡೀ ಹೊಲಾ ಅದ ಅಲ್ಲಾ, ಅದನ್ನ ಮಾರಿಸಲಿಕ್ಕೆ ಹಚ್ಚ್ಯೋಣ. ನಾನೇ ಅದನ್ನ ಮಾರಲಿಕ್ಕೆ ತಗೋಬೇಕು ಅಂತೇನಿ. ಅಂದ್ರ, ಅವನ ಹೊಲದ ತಲೀ ಮ್ಯಾಲೆ ನನ್ನ ಮಸಾರೀ ತುಂಡು ಏನದೇ ಅಲ್ಲಾ, ಅದನ್ನೇ ಅದನ್ನ ಕೂಡಿಸಿ ಒಂದು ಮಾಡಿ ಬಿಟ್ಟರ, ಏನ ಅಪರೂಪ ಹೊಲಾ ಆಗ್ತದಂದೀ ! ಅಂಥಾ ಮಸಾರಿ ಈ ಸೀಮ್ಯಾಗ ಸಿಗಲಿಕ್ಕಿಲ್ಲ. ಅದಕಂತ ಹೇಳಿ, ಈ ಸಾರೆ ಜಾತ್ರೀ ರೌಡು ಸ್ವಲ್ಪ ಹೆಚ್ಚುಮಾಡಬೇಕಾಗೇದ. ಅಂದ್ರ ಕೈಯಾಗ ಸಾಕಷ್ಟು ದುಡ್ಡೂ ಕೂಡತದ. ಹೀಂಗದ ನೋಡು. ತಿಳೀತೇಪಾ. ನನ್ನ ಮಸಲತ್ತು. ಅಂತೂ ಅವನ್ನ ಅವನ್ನ ಡಬ್ಬ ಹಾಕೂದ. ಏನಂತೀ !

**ಸುಬ್ಬಣ್ಣ:—** ನಾನು ನಿಮ್ಮ ಮಾತಿಗೆ ಹೊರತಲ್ಲಾ. ಆ ಶ್ರೀಮಂತನ್ನೂ ಬಲಿಯೊಳಗ ಹಿಡಿಯುವಷ್ಟು ಯುಕ್ತಿಶಕ್ತಿ ನಿಮ್ಮಹತ್ತರ ಅಪಾರ ಅದ. ಅಂದ್ಮ್ಯಾಲೇನು. ಬೇಕಾದಾಗ, ನೀವು ಹೇಳಿದ್ಹಾಂಗ

ಮಾಡತೇನಿ. ಮತ್ತೇನು. ಈಗಷ್ಟ ಹೊಲದಕಡೆ ಹೋಗಿಬರ್ತೇನಿ. ಹೊತ್ತಾತು. ನಮಸ್ಕಾರ. ( ನಮಸ್ಕಾರಮಾಡುವನು )

**ರಾಮಾಚಾರಿ:**—ಆತು ಹೋಗಿ ಬಾ. (ನಮಸ್ಕಾರಮಾಡುವನು)

**ಸುಬ್ಬಣ್ಣ:**—ಕೈಯ್ಯಾಗೇನೋ ಹಿಡಿದೀರಲ್ಲ ಗಂಟು.

**ರಾಮಾಚಾರಿ:**–ಇದೇಪಾ ಸಂಸಾರಾ ಅಂಬೋದು. ಹಳ್ಳದ್ದಂಡೀ ಪಕ್ಕೀರ್ಯಾ ಇದ್ದಾನಲ್ಲಾ, ಈ ಸಾರೆ ಕಾಯಿಪಲ್ಯಾ ಛಲೋ ಹಾಕ್ಯಾನ. ‘ ಯಾಕೋ ಸೂಳೀಮಗನೇ, ದೇವರ ಗುಡಿಗಷ್ಟೇನು ಕಾಯಿಪಲ್ಯಾ ಕೊಡುಹಾಂಗಿಲ್ಲೇನು ’ ಅಂತ ತುಡುರಿದೆ. ‘ ಇಕಾ ಯಪ್ಪಾ ನಿಮ್ಮನ್ನ ಬಿಟ್ಟರ ಹ್ಯಾಂಗಾದೀತು’ ಅಂತ ಇದಷ್ಟು ಮೆಣಸಿನಕಾಯಿ, ಅಷ್ಟ ಚವಳೀಕಾಯಿ, ಒಂದು ಸ್ವಲ್ಪ ಪುಂಡೀಪಲ್ಯಾ, ಒಂದು ನಾಕು ಎಳೆ ಎಳೆ ಸವತೀಕಾಯಿ ಅದೂ ಕೊಟ್ಟಾ. ಹ. ಹ. ಹ.

( ನಗುತ್ತ ಹೋಗುವರು; ತೆರೆಯೇಳುವದು )

## ೩ನೇ ನೋಟ: ರಾಮಾಚಾರಿಯ ರಣರಂಗ

[ ಅಂದಿನ ಮೂರೂ ಸಂಜೆ. ಶ್ರೀಮಂತನ ಮನೆ; ಶ್ರೀಮಂತ ರಾಮಾಚಾರಿ, ಸುಬ್ಬಣ್ಣ, ಮದ್ದು, ಅನಂತ, ಬಂಡೆಪ್ಪ ಮೊದಲಾದ ಜನ ಗುಂಪಾಗಿ ಮೂರೆಲೆ ಆಟ ಆಡಲು ಕುಳಿತಿದ್ದಾರೆ. ಆಟವು ಒಳ್ಳೇ ರಂಗಿಗೆ ಬಂದಿದೆ. ಹತ್ತರ ಒಂದೆರಡು ಟಕ್ಕೆ ಗಳು. ಒಂದು ಬದಿಗೆ, ಸ್ಟೋವ್ ಕಪ್ಪುಬಸಿ ಮೊದಲಾಗಿ ಚಹದ ಸಾಹಿತ್ಯಗಳು ಗುಂಪಾಗಿ ಬಿದ್ದಿವೆ. ಆಟಗಾರರೆಲ್ಲ ತಮ್ಮ ರುಮಾಲುಗಳನ್ನೆಲ್ಲ ತೆಗೆದು ಬದಿಯಲ್ಲಿರಿಸಿಕೊಂಡಿದ್ದಾರೆ. ಆಡಆಡುತ್ತ ಆಟಕ್ಕೆ ಒಳ್ಳೇ ರಂಗು ಬರುತ್ತಿದೆ. ರೊಕ್ಕದ ಝಣಝಣಾಟವು ಕೇಳಬರುತ್ತಿದೆ. ಹೀಗೆ ಕೆಲವೊಂದು ಹೊತ್ತು ಆಟವು ನಡೆದ ಮೇಲೆ..... ]

**ರಾಯರು:**— (ಕೈಯಲ್ಲಿಯ ಕಾರ್ಡುಗಳನ್ನೊಗೆದು) ಸಾಕುಬಿಡ್ರೋ ಇವತ್ತ. ಹೋಗಲೀ. ಯಾಕೋ ಭಾಳ ಲಗೂ ಬ್ಯಾಸರ ಬಂತಪಾ ಆಟ.

**ರಾಮಾಚಾರಿ**— ಬಂದೀದ್ದೀತು, ನೋಡಪಾ. ಮದ್ವಿ ಅಂತ ಠರಾವು ಆದ ಕೂಡ್ಲೇ ಮನಸೆಲ್ಲ ಮುಂದಿನ ಹೆಂಡತಿ ಮ್ಯಾಲೇ ಕೂತ ಬಿಟ್ಟಿದ್ದೀತು. ಅಲ್ಲೇ—

**ರಾಯರು:**— ಏನಪಾ ರಾಮಾಚಾರಿ, ನೀ ಏನ ಬರೇ ಭಾಷ್ಯಾಳನ ಕಾಣತೀದಿ. ಹಾಲಿಲ್ಲಾ ಬಾಟ್ಲಿಲ್ಲಾ ಗುಟಕ್ ಅನ್ನು ಅಂತ ಮೂಗಿಗೆ ತುಪ್ಪಾಹಚ್ಚಿ ಕೂಡಿಸಿಬಿಟ್ಟೇ ಆತು. ಏ ಸುಬ್ಯಾ — ಚಹಾ ಮಾಡಪಾ ಹೋಗಲಿ — ಸ್ಟೋ ಹೊತ್ತಸು. ಏ ಮದ್ದ್ಯಾ — (ಆತನಿಗೆ ಸ್ವಲ್ಪ ರೊಕ್ಕಕೊಟ್ಟು) ಆ ಗುರವ್ವನ ಅಂಗಡಿಗೆ ಹೋಗಿ ಒಂದು ಪಾವು ಚುರಮುರಿ ತಕ್ಕೊಂಡು ಬಾ. ಸಂಪಾಗಿ ಹಚ್ಚಿಸೋಣ.

**ಬಂಡೆಪ್ಪ:**— ಏನಪಾ ಮಗನ, ಶ್ರೀಮಂತಾ, ಅಶ್ಲೊ ಮದಿವಿ ಮಾತ ಆಡತೀರೇನು, ಕಂಗಾಲರಗತಿ ಚುರುಮುರಿಯೇನು ತರಸ್ತೀ. ಒಂದು ಸಜ್ಜ ಮೇಜವಾನೀ ಮಾಡಸಬಾರದೇಪಾ.

**ರಾಯರು:**— ಏನ ಹೇಳಬೇಕಪಾ ಬಂಡೆಪ್ಪಾ. ಒಳಗ ಏನು ಉಳಿದಿಲ್ಲ ನೋಡಪಾ ಅರ್ಥಾ. ನೀವೆಲ್ಲಾ ಏನೋ ಅಂತೀರಿ ಅಂತ ಇಂನೂ ಹೆಸರಿಗೆ ಮಾತ್ರ ಶ್ರೀಮಂತ ಆಗಿ ಕೂತೀನಿ. ಅಷ್ಟೇ.

**ಅನಂತ:**— ಹಿಂಗ ಅಂಬಾವಾ ಮದಿವೀ ಹ್ಯಾಂಗ ಮಾಡಕೋತೀಪಾ ಮಗನೇ. ನಿನಗ ಹಿಂಗಾದರ ಹೆಂಣಕೊಡೂ ಬೋಳೀಮಗಾ ಅರ ಯಾವ!

**ರಾಯರು:**— ನಾನೂ ಅದೇ ಅಂತೀನೋ ಮಂಗ್ಯಾನಮಗನೇ. ಆದರ ಇದಕೆಲ್ಲ ನಮ್ಮ ಶುಕ್ರಾಚಾರಿ ಏನೇನು ಯುಕ್ತಿ ಮಾಡತಾನೋ ನೋಡಬೇಕಪಾ. ಆತನೇ ಅಲ್ಲ ನಮ್ಮ ಕಂಪೂದ ಕುಲಪುರೋಹಿತಾ-

**ರಾಮಚಾರಿ:**— ಇನ್ನೂ ನಿನಗ ನನ್ನ ಮ್ಯಾಲ ವಿಶ್ವಾಸ ಇಲ್ಲೇ ಶ್ರೀಮಂತಾ ? ಹೀಂಗಾದರ ನಾ ಏನ ಹೇಳಲಪಾ ನಿನಗ ಅಂತೀನಿ. ಹೆಂಣು ತಂದು ಕೊಡೂದು ನನ್ನ ಕೂಡಿತು; ಅದರ ವಿಚಾರಾನೇ ಮಾಡಬ್ಯಾಡಬಿಡು ನೀ. ಈಗೇನ್ರೀ ಹೆಂಣು, ಇಕಾ ಅಂದರ ಎರಡು, ಅಕಾ ಅಂದರ ನಾಕು,

**ರಾಯರು:**— ಆದರ ರಾಮಾಚಾರೀ, ದುಡ್ಡಿಗೇನ ಮಾಡಂತೀ ?

| | |
|---|---|
| **ಅನಂತ:**—<br>**ಭಂಡೆಪ್ಪ:**—<br>**ಮದ್ದೂ:**— | ನೀ ಮದುವೆಗಾದರೂ ತಯಾರಾಗಪಾ. ನಮ್ಮಂಥಾ ಮಿತ್ರರಿದ್ದ ಮೇಲೆ ಹ್ಯಾಂಗಾದರೂ ಮಾಡೇವಂತ. |

**ರಾಮಾಚಾರಿ:**— ಶ್ರೀಮಂತಾ ನಾ ಹೇಳಲ್ಯಾ- ನೀನು ಅದರದೂ ಯೋಚನಿ ಬಿಟ್ಟು ಬಿಡು. ನಾ ನಿನಗೆ ಒಂದೂ ಪೈ ಖರ್ಚಾಗಧಾಂಗ ಮದ್ವಿ ಹೊಡಸತೇನಿ. ಕನ್ಯಾ-ಕಾಯಿ ಮದಿವಿ. ಒಂದು ದಿವಸದಾಗ ಮುಗಿಸಿಬಿಡೂಣು. ನಮ್ಮ ಗುಡಿಯೊಳಗೇ ಆಗಿಹೋಗಲಿ. ಚೂರುಚಾರು ಖರ್ಚು ಸಹಿತ ನಾನೇ ನೋಡಿಕೋತೇನಿ. ಆತೇಪಾ—

**ಸುಬ್ಬಣ್ಣ:**— (ಚಹಾಕ್ಕೆ ಎಸರಿಟ್ಟು ಬಂದು) ಇದೇನು ಹೇಳತೀರಿ, ರಾಮಾಚಾರ, ನಿಮ್ಮಂಥವರು ಕೂತುಕೊಂಡು ? ಶ್ರೀಮಂತನ ಮದಿವಿ ಅಂದರೇನು ? ನಾವೆಲ್ಲಾ ಹತ್ತಮಂದಿ ಮಿತ್ರರು ಇದ್ದೇವೆಂದರೇನು!!

ಒಂದು ದಿವ್ಸದಾಗ, ಅದೂ ಗುಡ್ಯಾಗ ಮದಿವೆಂತ ! ಹಾಂಗಾದರ ನಾಕಮಂದ್ಯಾಗ ನಮ್ಮ ಕಿಮ್ಮತ್ತು ಕಟ್ಟೀತು ! !

**ಮದ್ದೂ :—** ಸುಬ್ಬ್ಯಾ— ನೀ ಏನ ಹೇಳಿದೆಲ್ಲ ಈ ಮಾತೂ ಇದ ನೋಡಿದು ರಾಸ್ತ ಮಾತು. ನಂವು ಶ್ರೀಮಂತನ್ನು ಥೊಡ್ಡ ಬಳಗಾ. ಭಾಗಾದೇರೊಳಗ ನಾಚಿಗ್ಗೇಡಾದೀತು ಎಲ್ಲ್ಯಾರ.

**ಸುಬ್ಬಣ್ಣ :—** ರಾಮಾಚಾರೇ ನಮ್ಮ ಶ್ರೀಮಂತಗ ಅಂಥಾ ಇಂಥಾ ಬಿಡಾಡಿ ಬಡವರ ಹೆಣ್ಣು ಗಂಟಹಾಕಬ್ಯಾಡಪಾ ಮತ್ತ. ಹಾಂಗಿದ್ದರ ಮದ್ವೀನ ಬ್ಯಾಡಾ. ನಾ ಅನಕಾ ಹೇಳ್ತೇನಿ.

**ರಾಯರು:—** ಹೌದೊ, ಶುಕ್ರಾಚಾರಿ, ಮಾಡೂದು ಮಾಡಿ ಕೊಂಡಮ್ಯಾಲೆ ಒಂದು ಶ್ರೀಮಂತರ ಹುಡಿಗೀನ ಮಾಡಿಕೋಬೇಕಪಾ ಅಂದರ, ಸಂಗ್ತೀಲೆ ದುಡ್ಡೂ ತಂದಿರಬೇಕು ನೋಡು.

**ರಾಮಾಚಾರಿ:—**ಅಲ್ಲಪಾ ಮಗನ, ಹಬ್ಬ ಹಸಾ ಹಾಲು ತುಸಾ ಅಂದರ ಹ್ಯಾಂಗ ಆದೀತು ಆ ಮ್ಯಾಲೆ. ಹಾಂಗ ಅಂತಿದ್ದರ ಮಾತ್ರ ದುಡ್ಡ ಬೇಕಪಾ.

**ರಾಯರು:—**ದುಡ್ಡು ಎಲ್ಲಿದ ತರ್ಲ್ಯೋ? ಅದಕೇ, ಏನಾರ ಒಂದು ಹಂಚಿಕೀ ಹುಡುಕು ಅಂತೀನಿ.

**ರಾಮಾಚಾರಿ:—** ಒಳ್ಳೇ ಲೆಕ್ಕಪಾ ನಿಂದು. ನಿನಗರೇ ಏನು ಅರೀ ಆಗೇದ. ಆ ಮಡ್ಡೀಹೊಲಾ ಮಾರಿಬಿಡಲಾ.

**ಸುಬ್ಬಣ್ಣ :—** ಹೌದು ಶ್ರೀಮಂತಾ, ಮಾರಿಬಿಡುಹೋಗ್ಲಿ. ಅಂದರ ಒಂದ ಮದ್ವಿ ಸಂಪ ಹೊಡಿಸಿಬಿಡೋಣ. ಮಾಡುದು ಮಾಡಿ ಅನ ಮಾನ್ಯಾಕ. ನಿನ್ನ ಹೆಸರಿಗೆ ತಕ್ಕಹಾಂಗ ಮದಿವಿ ಆಗಿಹೋಗ್ಲಿ.

**ರಾಯರು:**—ಅದನ್ಯಾಂಗ ಮಾಡೂದಪಾ ಅಂತೀನಿ. ಉಳಿದದ್ದು ಅದೊಂದು. ನಾನು ಒಳ್ಳೇ ಜೇನಹುಂಕತನಾ ಮಾಡಿ ಇಟ್ಟಕೊಂಡು ಕೂತೇನಿ. ಅದೂ ಒಂದು ಮಾಡಿದರ ಮುಂದ ಗತೀ !

**ರಾಮಾಚಾರಿ:**— ಥೂ ನಿನ್ನ ಮಂಜಾಳಹೋಗಲಿ. ಹುಟ್ಟಿಸಿದ ದೇವರು ಹುಲ್ಲ ಮೇಯಿಸತಾನೇನೋ ? ಈಗ ಜಗತ್ತಿನಾಗ ಯಾರೇನು ಕೂಳಿಲ್ಲದ ಸಾಯತಾರೇ !! ನಮ್ಮ ಸುಬ್ಯಾಂದೇ ನೋಡು; ನಾಲ್ಕು ವರ್ಷಾತು ಮುಲ್ಕಿ ಪರೀಕ್ಷಾ ಆಗಿ. ಇನ್ನೂ ಒಂದು ಹತ್ತು ರೂಪಾಯದ ನೌಕ್ರಿಯೇನು ಹತ್ತಿಲ್ಲಪಾ. ಆದರೂ ಸಾಗೇದೋ ಇಲ್ಲೋ ಅವನ ಸಂಸಾರಾ! ಅವನೂ ಈಗ ಮೂರು ಮಕ್ಕಳನ್ನ ಹಡದಾನ. ಮತ್ತೀಗ ಒಂದು ಭಟ್ಟ್ಯಾಗ ತಯಾರಾಗಲಿಕ್ಕೆ ಹತ್ತೇದ. ಯಾಕೋ ಸುಬ್ಯಾ, ಹೌದೋ, ಅಲ್ಲೋ ?

**ಸುಬ್ಬಣ್ಣ:**—ನಾನೂ ಅದೇ ಅಂತೀನಿ. ಇಂಥಾ ಅಳುಬುರುಕತನಾ ನನಗ ಸೇರೂದುಲ್ಲ ನೋಡು. ನೀನೂ ಬಲು ಮೀನಾಮೇಷವ ಮನಸ್ಯಾನೋ ಶ್ರೀಮಂತಾ. ನಾ ಆಗಿದ್ದರ ಹೊಡದೇ ಬಿಡತಿದ್ದೆ.

**ರಾಮಾಚಾರಿ:**—ನಾವಾದರೂ ಏನು ಹೇಳೂದಪಾ ಮತ್ತ; ನೋಡು. ನಾಳೆ ನಾವೇ ಎಲ್ಲಾರೂ ಕೂತು ಹೊಲಾ ಮಾರಿಸಿದಿವಿ ಅಂದೀ ಮತ್ತ. ಅಂಥಾ ಅಪವಾದ ಸರ್ವಥಾ ಬ್ಯಾಡ ಮಾರಾಯಾ. ಯಾಕಣಾ ಸುಬ್ಯಾ. ಹೌದಂದಿಯೋ ಅಲ್ಲಂದೀಯೊ ? ಹೌದ್ರೀ—ಒಂದೇ ಊರವರು...ನೆರೆಹೊರೆಯವರು...ಮಿತ್ರರು...ಹೀಂಗ ಇರುವಾಗ ಅಪವಾದ ಹೊರಲಾಸಲ್ಲಾ. ಆದರ, ನೋಡಪಾ ಶ್ರೀಮಂತಾ, ಮದವಿ ಬೇಕಂದೀ; ಹೋಗಲಿ, ಕೃಷ್ಣಾರ್ಪಣ ಅಂತ ಕಂಣು ಮುಚ್ಚಿ

ಕೊಂಡು ಹೊಲಾ ಮಾರಿಬಿಡು. ಮುಂದ ಮತ್ತೊಬ್ಬ ದೇವರು. ಅಂಪರ ನಮಗೂ ಈಗ ಹೆಂಣಾ ನೋಡಲಿಕ್ಕೆ, ಅತ್ತಲಾಗ ಇತ್ತಲಾಗ ಹೋಗಲಿಕ್ಕೆ. ತಯಾರಿ ಮಾಡಲಿಕ್ಕೆ ಆಗತದ. ಇಲ್ಲೇ, ನಿನ್ನ ಮರ್ಜೀಪಾ.

**ಸುಬ್ಬಣ್ಣ**:—ಶ್ರೀಮಂತಾ, ಇಲ್ಲಿ ಕೇಳು. ನೀ ಹೊಲಾ ಒಂದೇ ಉಳದದ ಅಂತೀಯಲ್ಲಾ; ಅವಕೇ ನಾನೂ ಅದನ್ನ ಮಾರಿ ಬಿಡು ಅಂಬೋದು. ಅದು ಒಂದರಿಂದ ಬಂದೀತೇನು ! ಹೋದೀತೇನು ! ಮುಖ್ಯಾ, ನಿನಗ ಮದವಿ ಬೇಕೋ ಬ್ಯಾಡೋ !! ಇಲ್ನೋಡು, ನಾಳೆ ಒಂದು ಶ್ರೀಮಂತರ ಹುಡುಗೀನ್ನ ಮದಿವಿ ಆಗ್ತೀ ಹ್ಯಾಂಗೂ; ಆ ಮ್ಯಾಲೆ ಮತ್ತಿಂಥಾ ಹತ್ತು ಹೊಲಾ ಕೊಂಬೀಯಂತೇಳು.

**ರಾಯರು**: – ಹೌದಪಾ. ಮದ್ವಿ ಬೇಕು. ಅಂತ ಹ್ಯಾಂಗಾರ ಮಾಡಿ ಮಾರಲಿಕ್ಕೆ ಹೋದರ ನಿಂತಕಾಲ ಮ್ಯಾಲ ಅದನ್ನ ತಗೊಂಬುವವರ್‍ಯಾರು ?

**ರಾಮಾಚಾರಿ**:—ಯಾರಾರ ತಗೊಂಡೇ ತಗೊಂಡಾರು. ಅಂಥಾ ಹೊತ್ತು ಬಂದರ, ನಮಗ ಆಚು ಇದ್ದ ಮ್ಯಾಲ, ಒಂದು ಸ್ವಲ್ಪ ಇಳಿಸಿ ಕೊಟ್ಟ ಬಿಟ್ಟರಾತಪಾ. ಇಷ್ಟ್ಯಾ ಮೀರಿ ಯಾವನೂ ತಗೊಳ್ಳದಿದ್ದರ, ಎಲ್ಲ್ಯಾರ ಸಾಲಾ ಮಾಡಿ ನಾನೇ ತಗೋಂಡೇನಂತೆ. ಅದ್ಯಾಕಪಾ ಛಿಡೆ ಮತ್ತ. ನಿನಗ ನಿನ್ನ ಹೊತ್ತಿನಾಗ ನೆರವಾಗದಿದ್ದರ ತಗೊಂಡೇನು ಸುಡಬೇಕು ನಮ್ಮ ಜನ್ಮಾ.

**ಸುಬ್ಬಣ್ಣ** :— ಅಲ್ಲರೀ ರಾಮಾಚಾರ‍್ರೇ ; ಹಾಂಗಾರ, ನೀವೇ ತಗೊಳ್ಳಿಕ್ಕೆ ತಯಾರಿದ್ದರ, ಮತ್ತ ಶ್ರೀಮಂತಾ ಅತ್ತಲಾಗ ಇತ್ತಲಾಗ ಅಲೆದಾಡಬೇಕು ಯಾಕೇ? ಮೊದಲೇ ನೀವು ತಗೊಂಡ ಬಿಡ್ರಿ. ನಿಮಗ

ಅಂದ್ರ ಶ್ರೀಮಂತಾ ಮತ್ತೊ ನೂರಾರು ಬಿಟ್ಟು ಕೊಟ್ಟಾನು. ನಮ್ಮ ಆಚಿನಾಗ ನಿಮ್ಮ ಹಾಂಗ ನೆರವಿಗೆ ಬರೂ ಮಂದಿ ಕಡಿಮಿರೀ. ದುಡ್ಡು ಹೆಚ್ಚೊ ಮನಸ್ಸು ಹೆಚ್ಚೊ? ಯಾಕಪಾ ಮದ್ದು ??

**ರಾಮಾಚಾರಿ** :—ನೋಡ್ರೆಪಾ. ನೀವೆಲ್ಲಾರು ಹಾಂಗ ಒಪ್ಪಿದರ, ನಾನೇ ಮಾರಲಿಕ್ಕೆ ತಗೊಂಡಬಿಡತೇನಿ. ಕಡೀಕೆ ಸಧ್ಯಕ್ಕ ಗುಡೀ ದುಡ್ಡು ಹಾಕಿಯಾದರೂ ತಗೋತೇನಿ; ನಮ್ಮ ಶ್ರೀಮಂತನ ದಶಿಂದ ಮತ್ತೇನು ಬಂದದ್ದು ಬರಲಿ. ನಾ ಯೇನಪಾ ಮಿತ್ರಾ ಅಂತ ಹೇಳಿ, ಕಡಿಮಿ ಕಿಮ್ಮತ್ತಿಗೆ ಕೊಡು ಅಂತೂ ಕೇಳೂದುಲ್ಲಾ; ನೀವೆಲ್ಲಾರು ನಾಕು ಧೊಡ್ಡ ಜನ ಏನು ಕಿಮ್ಮತ್ತು ಕಟ್ಟೇರಿ ಅಷ್ಟಕ್ಕ ತಗೋತೇನಿ ಹೋಗಲಿ. ಆಚಿನಾಗ ಸಿಕ್ಕವರು ಅಂತ ಮತ್ತಷ್ಟು ಒತ್ತೂದು ಅದನೇ ನಮ್ಮ ನಮ್ಮೊಳಗ.

**ಸುಬ್ಬಣ್ಣ** :— ಮತ್ತೇನಪಾ ಶ್ರೀಮಂತಾ. ಏನಂತೀದಿ. ಆಗಿ ಹೋಗಲಿ ಮತ್ತ. ನಿನ್ನ ದಸಿಂದ ಅಂತ ರಾಮಾಚಾರು ತಾವೇ ಮುಂದ ಬಂದಾರ ಸ್ವತಃ. ಈಗ ನೀನು ಶಾಣೇತನ ಮಾಡಿ ಹೂ ಅಂದೀ, ನಾವು ಎಲ್ಲಾ ಒಳ್ಳೇ ಹುರುಪಲೇ ಕೆಲಸಮಾಡೇವು. ನಾಳೇ ಮದಿವಿ ಆಗತದ ಹರೇದ ಹೆಂಡತಿ ಮನಿಗೆ ಬರತಾಳ. ಒಂದು ನಾಕೆಂಟು ಮಕ್ಕಳೂ ಆಗತಾವ. ನಿನಗೇನು ಇನ್ನೂ ಅಷ್ಟು ದಿವಸ ಆಗಿಲ್ಲ. ಹತ್ತು ಇಲ್ಲಾ ಎಂಟಾದರು ಹುಟ್ಟೇ ಹುಟ್ಟತಾವ. ಮತ್ತ ಏನಂತೀ ಹೇಳು. ಸುಳ್ಳೇ ಹೈಗೈ ಬ್ಯಾಡಾ. ಸುಮ್ಮನ ದೇವರ ಮ್ಯಾಲ ಭಾರಾಹಾಕಿ ಹೋಡೀ ಛಕಡೀ.

**ರಾಯರು**:— ಆಗಲೆಪಾ; ಮತ್ತ ನೀವೆಲ್ಲಾ ಹೇಳ್ತೀರಿ. ನಾಳೆ ಖರೀದಿ ಪತ್ರಾ ಮಾಡಿ ಬಿಡೋಣ. ಆತೇ.

**ಸುಬ್ಬಣ್ಣ**:— ಶುಭಸ್ಯಶೀಘ್ರಂ. ಈಗ ನಡೀರಿಲಾ. ಸಬ್ ರಜಿಷ್ಟ್ರಾರ ಕಡೆ ಹೋಗಿಬಿಡೋಣು.

**ರಾಯರು**:—ಈಗೇನು ಮಾಡತೀರಿ. ಕಚೇರಿ ಬಿಡೋಹೊತ್ತಾತು. ಅಷ್ಟು ಚಹಾ ಪಹಾ ತಗೊಳ್ಳಿರಿ.

**ರಾಮಾಚಾರಿ**:— ಕಚೇರಿ ಬಿಟ್ಟರೇನಾತೂ. ಕಿಸೇದಾಗ ರೊಕ್ಕ ಝುಣಝುಣ ಅಂತಿದ್ದರ ಸಬರಜಿಷ್ಟ್ರರ ಕಚೇರಿ ಇಪತ್ತನಾಕ ತಾಸು ಚಾಲೂನೇ ಇರತದ.

**ರಾಯರು**:— ಆಗಲಿ. ಚಹಾ ಹ್ಯಾಂಗೂ ತಯಾರ ಆಗೇದ. ಇದಷ್ಟು ತಗೊಂಡು ಸಬರಜಿಷ್ಟ್ರರ ಮನೀಕಡೇನೇ ಹೋಗೋಣ.

( ಎಲ್ಲರೂ ಕುಳಿತು ಚಹಾ ಕುಡಿಯುವರು )

**ಸುಬ್ಬಣ್ಣ**:—ಇವತ್ತ ಮಾತ್ರ ಚಹಾ ರಂಗ ಆಗೇದ ನೋಡ್ರೆಪಾ.

**ರಾಮಾಚಾರಿ**:—ಹೊತ್ತ ಹ್ಯಾಂಗ ಕೂಡಿ ಬಂದೇದ! ಯಾಕಪಾ ಶ್ರೀಮಂತಾ.

**ರಾಯರು**:— ಆದರ ಚುರಮುರಿ ತರಸಲಿಲ್ಲಾ.

**ಮದ್ದೂ**:—ಆಗಲಿ ಬಿಡು ಇಲ್ಲದಿದ್ದರಿಲ್ಲ. ಇವತ್ತ ಇಷ್ಟೇ ಆತು.

**ಅನಂತ**:— ನಾಳೆ ಮದಿವ್ಯಾಗ ಅದ ಅಲ್ಲಪಾ ಸಂಪು.

**ಸುಬ್ಬಣ್ಣ**:— ಮತ್ತೇನು ಶ್ರೀಮಂತಾ ಮದ್ವೀ ಇದೇ ಊರಾಗ ಕೊಡಸೂದು ಹೌದಲ್ಲೊ.

**ರಾಯರು**:—ಇಲ್ಲೇ ಮಾಡಿದರೇ ಛಲೋ ಅಂತೀನಿ.

**ರಾಮಾಚಾರಿ:**— ಬರಾಬ್ಬರಿ; ಏನೇ ಆದರೂ ಮದವಿ ಮದವೀ ಇದೇ ಊರಾಗೇ ಮಾಡೂದು. ಯಾಕಂತೀಯಾ, ಗೊತ್ತು ಬಲ್ಲ ಊರು, ತುಸಾ ಹೆಚ್ಚುಕಡಿಮಿ ಆದರ ಮುಚ್ಚಿಕೊಂಡು ಹೋಗಲಿಕ್ಕೆ ಬರತೇದ.

**ಸುಬ್ಬಣ್ಣ:**—ಅಂತೂ ಮದವಿ ಮಾತ್ರ ದುಂದು ಮಾಡಿ ಬಿಡೋದೇನಪಾ. ಐದು ದಿವಸಾ; ಎರಡು ಭೂಮಾ; ಮೆರವಣಿಗ್ಗೆ ದೇಸಾಯರ ಕಾರು; ಒಂದು ಜೋಡಿ ಕರಡೀ ಮಜಲು, ಒಂದು ಜೋಡಿ ಬ್ಯಾಂಡು; ಯಾಕಣಾ ಮದ್ದ್ಯಾ, ಏನಂತೀ?

**ಮದ್ದ್ಯಾ:**— ಹುಂ ಹೊಡಿಯೂದ ಮತ್ತೇ.

**ಸುಬ್ಬಣ್ಣ:**— ಶ್ರೀಮಂತಾ. ದೇವರೂಟದ ದಿವಸ ವಿಶೇಷೇನು ಬ್ಯಾಡಾ; ಒಂದು ಮಸಾಲೀ ಖೀರು, ಒಂದು ಕೇಸರಭಾತು; ಅಷ್ಟೇ ಸಾಕು. ಯಾಕ್ರೀ.

**ಬಂಡೆಪ್ಪ:**— ಮಾಮನೀ ಪ್ರಸ್ತ ಒಂದುಳೀತದಲ್ಲಾ.

**ಸುಬ್ಬಣ್ಣ:**— ಮಾಮನೀಪ್ರಸ್ತಕ್ಕೇನು ಒಂದು ಮೋತೀಚೂರು, ಇಲ್ಲಾ ಮಂಡಿಗಿ ಮಾಡ್ಸಿ ಬಿಡೂಣು. ಮುಂದ ಮೇಜವಾನೀ ದಿವಸಾ ಏನು ಮಾಡ್ಬೂದರೆಪಾ ರಾಮಾಚಾರೇ; ಒಂದು ಜಿಲೇಬಿ ಮಾಡಿಸಿ ಬಿಟ್ಟರ ಸಾಕಲ್ಲೇ?

**ರಾಮಾಚಾರಿ:**— ಓಹೋ.

**ಸುಬ್ಬಣ್ಣ:**— ಇನ್ನ, ಹಪ್ಪಳ ಸಂಡಿಗಿ ಅಂಬೋಡಿ ಬುರಬುರಿ ಕೋಸಂಬರಿ ಚಟ್ಣಿ ವಾಂಗೇಭಾತ ವಾಳಕಾಭಾತ ಮಿರ್ಚಿಭಾತ

ಬಟಾಟೇಭಾತ ಎಲ್ಲಾ ಅನುಕೂಲೀ ಪ್ರಕಾರ ದಿನಂಪ್ರತಿ ಇದ್ದೇ ಇರ ತಾವ. ಯಾಕಪಾ ಬಂಡೆಪ್ಪಾ.

**ರಾಮಾಚಾರಿ:**— ಆತೊ ಸುಬ್ಬ್ಯಾ,- ಕೋಠೀಖೋಲೀ ವ್ಯವಸ್ಥಾ ನಿನ್ನ ಕಡಿಗೆ. ನೀ ಬೇಖಾದ್ದು ಮಾಡಿಸಿ ಬಿಡು ಹೋಗಲಿ. ಒಮ್ಮೆ ಹಾಂಗ ಮನಸಮಾಡಿದ್ರ ನಮ್ಮ ಶ್ರೀಮಂತೇನು ಯಾತಕ್ಕೂ ಹಿಂದು ಮುಂದು ನೋಡೂದುಲ್ಲಾ. ಆಗಲಿ ಹಾಂಗಾರ ಏಳಪಾ ಶ್ರೀಮಂತಾ, ಮುಂದ ನೋಂದಣೀ ವ್ಯವಸ್ಥಾ ಅಷ್ಟು ಮಾಡಿಸಿ ಬಿಡೂಣು.

**ರಾಯರು:**— ಆಗಲಿ ನಡೀರೆಪಾ ಹೋಗೂಣು.

( ಎಲ್ಲರೂ ಹೋಗುವ ತಯಾರಿ ಮಾಡುವರು; ತೆರೆ ಬೀಳುವದು. )

## ೪ ನೇ ನೋಟ:

## ಕುಂಟೆಗೆಂಟೆ ಚ್ಯಾಷ್ಟಿ; ಕುರುಡಗ ಹದಿನಾರು

[ ಮತ್ತೊಂದು ದಿನ. ಗುಡಿಯಂಗಳ. ರಾಮಾಚಾರಿ, ಸುಬ್ಬಣ್ಣರ ಪ್ರವೇಶ. ]

**ರಾಮಾಚಾರಿ:**— ಯತ್ತಲಾಗಿಂದ ಬಂದ್ಯೋ ಸುಬ್ಬ್ಯಾ?

**ಸುಬ್ಬಣ್ಣ:**— ಯಾಕೇ? ಮನಿಯಿಂದ!

**ರಾಮಾಚಾರಿ:**— ಹಾಂಗಲ್ಲೊ ಎಬಡಾ, ಯಾವ ಹಾದೀಲೆ ಬಂದೀ, ಅಂದೆ.

**ಸುಬ್ಬಣ್ಣ:**—ಯಾಕ್ಸ? ಪ್ಯಾಟೀ ಹಾದೀಲೇನೇ ಬಂದೆನಲ್ಲಾ!

**ರಾಮಾಚಾರಿ** :— ಹಾಂಗಾದ್ರ, ಆ ದೇಸಾಯರ ಹೆಂಡತೀನ್ನ ಕಂಡಿದ್ದೀಯಲ್ಲ ಹಾದ್ಯಾಗ? ಇದೇ ಈಗ ಹೋದರು ನೋಡು ಗುಡಿಯಿಂದ–.

**ಸುಬ್ಬಣ್ಣ** :— ಹೌದು ನೋಡಿದೆ. ನಾನು ಆ ಸೇಟಜೀ ಅಂಗಡಿಗೆ ಬರೂದಕ್ಕ ಅವರು ಬಸವಂಣನ ಕೂಟಿನಾಗ ತಮ್ಮ ಓಣೀ ಕಡಿಗೆ ಹೊಳ್ಳಿದರಪಾ. ಯಾಕ ?

**ರಾಮಾಚಾರಿ** :— ಥೂ ನಿನನಿನನಿನ; ಮಹಾ ಅರಿಷ್ಟ ಮುಂಡೇ ಮಗನೋ ನೀನು. ದೇವರು ಕೊಟ್ಟ್ರೂ ದುರ್ದೈವಿ ನೋಡು. ಆ ದೇಸಾಯರ ಹೆಂಡತೀ ಸಂಗ್ತೀಲೆ, ಇವತ್ತ ಅದಾವದೋ ಒಂದು ಧಾರವಾಡದ ಹುಡುಗೆಂತ ಬಂದಿತ್ತು. ಅಹಾ ಏನ ಹೇಳಲೆಪಾ. ಬಲು ಅಪರೂಪ ಹುಡುಗಿ ನೋಡಣಾ! ಶಾಹರದ ಹುಡುಗೀ ಕೇಳೂದದನೇ— ! ನಾಯೇನು ಈ ಸೀಮ್ಯಾಗೇನು ಅಂಥಾ ಅಪ ರೂಪ ಹುಡಗೀನ್ನ ನೋಡಿದ್ದಿಲ್ಲ ನೋಡು !

**ಸುಬ್ಬಣ್ಣ** :— ಹೌದೋ ! ನಾನೂ ಧೂರದಿಂದ ನೋಡಿದೆ ! ಅದಕೇ ಒಳೇ ಲಗುಲಗು ಕಾಲಹಾಕಲಿಕ್ಕೆ ಹತ್ತಿದ್ದೆ. ಆದರೂ ನಾ ಬರೂದ್ರಾಗ ಅವರು ತಮ್ಮ ಓಣಿಗೆ ಹೊಳ್ಳಿದ್ದರಪಾ.

**ರಾಮಾಚಾರಿ**:— ಹೊಳ್ಳಿದ್ದರೇನಾತೆಪಾ, ನಿನಗೆ ಆ ಓಣ್ಯಾಗ ಹೋಗಬಾರದಂತ ಬಂದೀ ಹುಕುಮಾಗಿತ್ತೇನ್ ಮಗನೇ ?

**ಸುಬ್ಬಣ್ಣ** :—ಹಾಂಗೇನಿಲ್ಲ. ನಾನೂ ಬೆನ್ನ ಹತ್ತಾವ; ಅಂಬೂದ ರೊಳಗ ಅತ್ತಲಾಗಿಂದ ಆ ಮಾರವಾಡಿ ಬರತಿದ್ದಾ. ಅಂತ ನಿರ್ವಾಹ ಯಿಲ್ಲದ ಮತ್ತ, ನೀವ್ಹೇಳಿ ಕಳಿಸಿದ್ದಿರಲ್ಲಾಂತ ಬಂದಬಿಟ್ಟೆ.

**ರಾಮಾಚಾರಿ:**— ಛೀ ಏನ. ಮುಂಜಾನೆದ್ದು ಯಾವಾಕೀ ಮಾರೀ ನೋಡಿದ್ದೆಪಾ, ಆ ಬಂಡೆಪ್ಪನ ಮುದುಕಿ ಬೆಟ್ಟಯಾಗಿದ್ದಳೋ ಏನು ! ಏನು ಬರಬೇಕಾರ ಬೆಕ್ಕುಗಿಕ್ಕು ಅಡ್ಡ ಹಾಯ್ಶೋ ??

**ಸುಬ್ಬಣ್ಣ:**— ಏನಾಯಿತೋ ಏನೋ ಮಹಾರಾಯಾ ! ಆತು; ಮಿಂಚಿ ಹೋದದ್ದಕ್ಕ ಚಿಂತಿಸಿ ಫಲವೇನು.

**ರಾಮಾಚಾರಿ:**— ಹುಚ್ಚಾ; ಹಂಚಿಗಿ ಮಾಡಿದರ ಮಿಂಚಿ ಹೋದದ್ದೂ ಹಿಂಬರಿಕಿ ಲಾಗಾ ಒಗದೀತು. ಆತು. ನಿಂದರು. ಊರಿಗೆ ಬಂದಾಕಿ ನೀರಿಗೆ ಬರೂದುಲ್ಲೇ ಅಂತಾರಲ್ಲಾ.—ಮತ್ತೊಮ್ಮೆ ಗುಡಿಗೆ ಬಂದೇ ಬಂದಾಳು. ನಿಂದರು. ಅದು ಹೋಗಲಿ. ಮತ್ತ ಶ್ರೀಮಂತ ಏನಂತಾನ—ಈಗ— ?

**ಸುಬ್ಬಣ್ಣ:**— ರಾಮಾಚಾರ, ಹೊಲಾ ಬರಿಸಿಕೊಂಡಿರಿ. ಅರ್ಧಾ ಗಂಟ ಕೊಟ್ಟು ಬಿಟ್ಟರಲ್ಲಾ! ನೀವೂ ಹುಚ್ಚತನ ಮಾಡಿದಿರಿಪಾ.

**ರಾಮಾಚಾರಿ:**— ಅರ್ಧಾ ಗಂಟ ಕೊಟ್ಟರ, ಇನ್ನೂ ಅರ್ಧಾ ಗಂಟು ಹಿಡಕೊಂಡೀನಲ್ಲ. ನೋಡೂಣ ಆ ಶ್ರೀಮಂತ ಅದನ್ನ ಹ್ಯಾಂಗಾರ ವಸೂಲ ಮಾಡತಾನ !

**ಸುಬ್ಬಣ್ಣ:**— ಅದೆಲ್ಲಾ ಆತು. ಹ್ಯಾಂಗಾರ ಅವಗೊಂದ ಮದ್ವಿ ಶಾಸ್ತ್ರ ಒಂದು ಮಾಡಿ ಬಿಡಬೇಕಲ್ಲಾ—

**ರಾಮಾಚಾರಿ:**— ಹೌದು, ಅದರಾಗಿನ್ನೂ ನಮಗ ಫಾಯದೆ ಅದನೀ ಅದೀ — ಇಂದಿಗೆಂಟು ದಿವಸದ ಹಿಂದ ನಾನು ಸಂಚಾರಕ್ಕ ಹೋಗಿದ್ದೆನಲ್ಲ, ಬೆಟಗೇರಿಗೆ; ಆ ಊರ ಪಾಟೀಲರ ಮನಿಗೇ ಹೋಗಿದ್ದೆ. ಮೂರು ರೂಪಾಯಿ, ಅಷ್ಟು ಹೆಸರು, ಒಂದು ಸ್ವಲ್ಪ

ಉದ್ದ, ಹುಳ್ಳೀ ಕೊಟ್ಟರು. ಅವರು ಮಾತ್ರ ಭಾರೀ ಶ್ರೀಮಂತರು ನೋಡಪಾ. ಹದಿನಾರೆತ್ತಿನ ಕಮತಾ; ನಾಕು ಆನೀಯಂಥಾ ಕ್ವಾ(ಕೋ)ಣ ಯೇನು. ಎರಡು ಆಕಳ. ಐದು ಎಮ್ಮಿ. ಅರವತ್ತು ಕೂರಿಗಿ ಎರೀ ಭೂಮಿ ಅಂತ.

**ಸುಬ್ಬಣ್ಣ:**—ಅಂತೂ ಭಾರೀ ಮನತನ ಅಪಾ. ಅಂತೇ ನಿಮಗ ಒಳ್ಳೇ ಸನ್ಮಾನ ಮಾಡ್ಯಾರಲ್ಲಾ. ಮತ್ತ ನಿಮ್ಮ ಯೋಗ್ಯತಾನೇ ಅಂಥಾದು—

**ರಾಮಾಚಾರಿ:**— ಹೌದು ಮತ್ತ, ನಮ್ಮನ್ನ ನೋಡಿ ಮನೀ ಯವರೆಲ್ಲಾ ಭಾಳ ಸಂತೋಷಬಟ್ಟರು. ನಾವು ನಮ್ಮ ಐಟೇ ಹಾಂಗ ಇಟ್ಟುಕೊಂಡಿರತೇವಿ.

**ಸುಬ್ಬಣ್ಣ:**— ಎಂಥಾ ಮಾತರೀ.

**ರಾಮಾಚಾರಿ:**— ಅವರ ಮನ್ಯಾಗ ಒಂದು ಒಳೇ ಛಲೋ ಕನ್ಯಾ ಅದ ನೋಡಪಾ. ಹದ್ನಾಕ ವರ್ಷ—ಏನ ಹೆಚ್ಚೇ ಆಗ್ಯಾವ್ರೋ! ಈಗಿನ ದಿವ್ಸದಾಗೇನು ಸುಬ್ಬ್ಯಾ, ಹರಕಿಗೆ ಬಿಟ್ಟ ಕ್ವಾಣಾ ಬೆಳಿಸಿ ಧಾಂಗ ಬೆಳಿಸೇ ಬೆಳಸ್ತಾರ ಹೆಂಣುಗೋಳ್ನ. ಶ್ರೀಮಂತನ್ದರೇ ಏನ ಗಂಟ ಹೋತು. ಮದಿವ್ಯಾದ ಮರುದಿನ ಮನೀಗೆ ಬಂದರ ಛಲೋ ಅಲ್ಲೇ ಹೆಂಡ್ತಿ ?

**ಸುಬ್ಬಣ್ಣ:**— ಹ್ಯಾಂಗೂ ಶ್ರೀಮಂತರ ಹೆಣ್ಣೇ ಹುಡುಕೀರಿ. ಗಂಟ ಹಾಕಿಸಿ ಬಿಡಿರಿ ಹೋಗಲಿ.

**ರಾಮಾಚಾರಿ:**— ನಾನು ಅದರ ಪೂರ್ವಕಥಾ ಪ್ರಸ್ತಾಪ ಮಾಡೇ ಇಟ್ಟೇನಿ. ‘ ಏನ್ರೆಪಾ ನಿಂಮ ಗೊತ್ತಲೇ ಏನಾರೂ ವರಾ

ಅವಯೇನು ' ಅಂತ ಕೇಳಿದ್ರು—ಆ ಹುಡುಗೀ ಅಣ್ಣಂತ. ' ಓಹೋ ಎಷ್ಟು ಬೇಕು ಅಷ್ಟು ಅವ; ಒಂದಸಕಾ ಪೈಲಾನಂಬರ ವರಾ ಅದ ' ಅಂತ ನಾನೂ ಹೇಳೇಬಿಟ್ಟೆ. ಆ ಹುಡಿಗೀ ಅಂಣನೂ ಹ್ಯಾಂಗಾರ ಆ ಹುಡಿಗಿನ್ನ ಅಷ್ಟು ಲಗೂ ದಾಟಹಾಕಬೇಕು ಅಂತ ಮಾಡಿಧಾಂಗ ಕಾಣಸ್ತದ. ಇಮನೇ ವರಾ ಅಂದರೂ ಏನ ಅಡ್ಡಿಯಿಲ್ಲ ಅಂದಾ.

**ಸುಬ್ಬಣ್ಣ:—** ಯಾಕ ಆ ಹುಡಿಗ್ಗೆ ತಂದಿ ತಾಯಿ ಯಾರೂ ಇಲ್ಲೇನು?

**ರಾಮಾಚಾರಿ:—** ತಂದಿ ಇಲ್ಲೇಯಿಲ್ಲಾ. ತಾಯಿಯೊಬ್ಬಾಕಿ ಇದ್ದಾಳ ಪಾಪ! ಆ ಮಲಅಣ್ಣ ಒಬ್ಬಾವ; ಒಂದು ತಮ್ಮ ಅದ– ಆ ಹುಡಿಗೀ ವಾರಿಗೀದು. ಆತು. ತಂದಿಯೇನೊ ಆ ಹುಡಿಗಿ ಹೆಸರ್ಲೆ ಮೂರು ನಾಲ್ಕು ಸಾವಿರ ತಗದಿಟ್ಟ್ಯಾನಂತ. ಅದಕ ಆ ಹುಡಿಗೀ ಅಣ್ಣಗ ತುಸಾ ಹೊಟ್ಟೇಕಿಚ್ಚು ಅಂತ ಕಾಣ್ತದ.

**ಸುಬ್ಬಣ್ಣ:—** ಆತ ಬಿಡ್ರಿ ಅದರ ಫಾಯದೇ ನಾವು ತಗೊಂಡರಾಯಿತು. ಅಂತೂ ಛಲೋ ಕನ್ಯಾನೇ ಆರಿಸೀರೆಪಾ. ಹಾಂಗಾರ ಶ್ರೀಮಂತನ ದೈವ ತೆರೀತು.

**ರಾಮಾಚಾರಿ:—** ಶ್ರೀಮಂತನ್ನ ದೈವತೆರದರ, ಮತ್ತ ನಾಕ ದಿವಸ ನಮ್ಮ ಬ್ಯಾಳಿ ಬೆಯ್ಯತದೇ– ಅದರಾಗೇನು; ಹ್ಯೊದಲ್ಲೊ ?

**ಸುಬ್ಬಣ್ಣ:—** ಮತ್ತೇನು ನಡದೇ ಬಿಟ್ಟದಲ್ಲ ಹತ್ತು ವರ್ಷ.

**ರಾಮಾಚಾರಿ:—** ಅದಕ್ಕ, ನಾಳಿನ ಬನದಹುಣ್ಣಿವಿ ಮಾಡಿ, ನನಗ ಮತ್ತೊಮ್ಮೆ ಬಾ ಅಂತ ಹೇಳ್ಯಾರ ಗುಂಡೇರಾಯರು– ಅಂದರ ಆ ಹುಡಿಗಿ ಅಣ್ಣಾ. ಆ ಹುಡಿಗಿ ಹೆಸರೇನೋ ಸೀತಾ ಅಂತ. ಮುಂದ

ತುಷ್ಯ ಮೀರಿಸಿಕೊಂಡು ಮಾಘದಾಗ ವರಾ ಒಮ್ಮೆ ನೋಡಲಿಕ್ಕೆ ಬರತಾರಂತ ಅವರು. ಕನ್ಯಾ ಅನಕಾ ನೋಡಿಧಾಂಗ ಆಗೇದ. ನಾನೇ ನೋಡಿದಮ್ಯಾಲ ಉಳೀತೇನು !

**ಸುಬ್ಬಣ್ಣ**:— ಅಂದರ ಮುಂದ ಚೈತ್ರ ವೈಶಾಖಧಾಂಗ ಮದಿವಿ ಹೊಡಿಸಿಬಿಟ್ಟರಾತು.

**ರಾಮಾಚಾರಿ**:— ವೈಶಾಖೆಲ್ಲೆ ? ವೈಶಾಖದಾಗ ಅಸ್ತಬೀಳತದ. ಅದಕ ಆದಷ್ಟು ಉಗಾದಿ ಹೊರ ಒಳಗ ಹೊಡಿಸೇಬಿಡೂದು. ಆದರ ಮತ್ತ, — — ಈ ಮಾತೆಲ್ಲ ಗುಟ್ಟಾಗಿ ಇರಬೇಕು. ಆಂ, ಮತ್ತ ! ಶ್ರೀಮಂತಗೂ ಹೇಳಿಟ್ಟಿರಬೇಕು. ನಾಳೆ ಹೆಂಣಿನಕಡೀಯವರು ಬಂದಾ ಗಾಗಲೀ, ಮದಿವ್ಯಾಗಾಗಲೀ, ಶ್ರೀಮಂತನ ಖರೇ ಸ್ಥಿತಿಗತಿ ಹೊರ ಬಿದ್ದಿರಬಾರದು. ಅಷ್ಟು ಮಾತ್ರ ನಾವೆಲ್ಲ ಎಚ್ಚರ ಇರಬೇಕು. ಒಮ್ಮೆ ಮದಿವಿ ಆಗಿಹೋತು ಅಂದರ ಮುಂದ ಯಾರು ಹಾಳಭಾವಿ ಬಿದ್ದ ಭಾಗ್ಯ ನಮಗೇನು. ಸಾಕ್ಷಾತ್ ಬ್ರಹ್ಮಸಂಕಲ್ಪ; ಆಗಿಹೋಗಿರತದ. ಯಾರಪ್ಪ ಬಂದರೂ ಏನ ತಪ್ಪಾಹಾಂಗಿಲ್ಲ.

**ಸುಬ್ಬಣ್ಣ**:— ಹಾಂಗಾದರ ಮದ್ವೀ ಈ ಊರಾಗ ಮಾತ್ರ ಮಾಡಬಾರದು ನೋಡಿರಿ.

**ರಾಮಾಚಾರಿ**:— ಬರಾಬ್ಬರಿ. ಕನ್ಯಾ ಇದ್ದಲ್ಲೇ ಹೋಗಿಬಿಟ್ಟ ರಾತು. ಈಗೇನು ಶ್ರೀಮಂತ ನಮ್ಮ ಕೈಯಾಗ. ಹೇಳಿಧಾಂಗ ಕೇಳ ತಾನ. ಈಗ ಮುಖ್ಯ ಅವನ ಹೊಲಾ ನಮ್ಮ ಪದರಿನಾಗ ಬಿತ್ತು. ಇನ್ನೇನು. ಬೇಕಾದರ ನಾವಷ್ಟು ಅನುಕೂಲ ಆಗೋಣಂತ ಅವಗ

ಅನಕಾತಾ. ಯಾಕಂದರ ಆಗಳೇ ಹೇಳಿಧಾಂಗ ಮುಂದ ಫಾಯಿದೇ ನಂಮದs.

**ಸುಬ್ಬಣ್ಣ**:—ಹೌದೇ ಹೌದು. ಮದಿವ್ಯಾಗರ ಏನು! ಶ್ರೀಮಂತಗ ಏನು ಹಿಂದಿಲ್ಲಾ ಮುಂದಿಲ್ಲಾ. ಮದಿವ್ಯಾಗ ಓಡ್ಯಾಡವರೂ ಬಿಡವರೂ ನಾವು; ನಮ್ಮ ಹೆಂಗಸರೂ. ಎರಡು ಲಾರೀ ತುಂಬಿಕೊಂಡು ಹೋಗೂ ಣಂತ ಬಿಡ್ರಿ, ಮಂದೀನ್ನ. ಅನವಶ್ಯಾಕ. ದುಂದುವಾಡಿ ಬಿಡೋದು ನಮ್ಮದೇ ಕೈ; ನಮ್ಮದೇ ಬಾಯಿ.

**ರಾಮಾಚಾರಿ**:— ಆತು, ನೀನೀ ಶ್ರೀಮಂತನ್ನ ಉಬ್ಬಸತನೇ ಇರು. ನಾನು ಆದಷ್ಟು ಬ್ಯಾಗ ಹೋಗಿ ಹೊಂದಿಸಿಕೊಂಡು ಬರತೇನಿ. ನಾಳೀ ವರಾ ನೋಡಲಿಕ್ಕೆ ಬಂದಾಗ ಅವರ ಕಂಣಾಗ ಮಂಣು ಹಾಕ ಲಿಕ್ಕೆ ಅಷ್ಟ ಏನಾರೇ ವ್ಯವಸ್ಥಾ ಮಾಡಿದರಾತು.

**ಸುಬ್ಬಣ್ಣ**:—ಅದಕೇನು ಬಿಡ್ರಿ, ಬೇಕಾದಂಥಾ ಶ್ರೀಮಂತಿಕೀ ಠೀವು ಇಡೋಣಂತ; ಸ್ವಂತ ಶ್ರೀಮಂತನ ಮನೀ ಒಂದು ಸಿಸ್ತವಾರ ಇದ್ದ ಅದನೇ—, ಇನ್ನ ಆ ಇವಾಮ್ಯಾಗ, ರಮುಜಾನಗ ನಾಕ ನಾಕ ಆಣೆ ಒಗದರ, ಡ್ರೆಸ್ಸ ಹಾಕ್ಕೊಂಡ ಬಂದು ಮುಂಜಾನೆ ಹಿಡಿದು ಸಂಜೀತನಕ ಬಾಗಲಾ ಕಾಯ್ತಾರ; ಹೇಳಿದ ಕೆಲ್ಸಾ ಮಾಡತಾರ; ಮತ್ತ ನನ್ನ ಹೆಂಡತಿ, ಬಂಡೆಪ್ಪನ ಹೆಂಡತಿ, ನಿಮ್ಮನೀಯವರು, ಇವ ರಿಗೆಲ್ಲಾ ಹ್ಯಾಂಗಾರ ಮಾಡಿ, ದೇಸಾಯರ ಮನಿಯಿಂದ ಒಂದು ನಾಕು ಛಲೋ ಛಲೋ ಸೀರಿಪಾರಿ ಕೊಡಿಸಿದರ, ಎಂಥೆಂಥಾ ಶ್ರೀಮಂತರ ಹೆಂಗಸರ್ನ ನಾಚಸೂ ಹಾಂಗ ಕಂಡಾರು. ಇನ್ನ, ನಾಯಕರ ಮನೀ ದೂ—ಆ ಗಿಳೀ ಚಿತ್ರದ್ದು ಎಲೆಅಡಿಕೀ ತಾಟು, ಶಹಾಪುರದ ಡಬ್ಬಿ—

ಅತ್ತರದಾಣಿ ಗುಲಾಬದಾಣೀ — ಬೇಕುಬೇಕಾದ್ದು ತರೋಣು! ದೇಸಾಯ್ರು ಹೋದ ವರ್ಷ ಕೊಂಡಾರಲ್ಲಾ—ಆ—ರತ್ನಗಂಬಳಿ—, ಒಂದು ನಾಕು ಕುತ್ನೀ ಲೋಡು ತಂದ ಇಟ್ಟುಬಿಟ್ಟರ ನಮ್ಮ ಶ್ರೀಮಂತ ಖರೇ ಶ್ರೀಮಂತನೇ ಆದಾನು. ಮತ್ತ ಶ್ರೀಮಂತಾ ನೋಡಲಿಕ್ಕೆ ಸ್ವಲ್ಪ ಐಟಿದ್ದಾನ. ಒಂದೆರಡು ಛಲೋ ರೇಶ್ಮಿ ಅಂಗಿ, ಸರ್ಜಿನಕೋಟು, ಜರದ ಜಮುನಾಗಂಗಾ ಶಲ್ಯೆ ಹೊರಿಸಿ ಕೂಡಿಸಿ ಬಿಡೋಣು—ಅಂದ್ರ ಕೇಳೀರೇನು!! ಇವನ್ನೆಲ್ಲ ನನಗ ಬಿಟ್ಟುಬಿಡರಿ; ಮಾಡತೇನಿ, ನೀವು ಹೆಣ್ಣಿನ ವರ್ನ ಒಪ್ಪಿಸಿ ಕರಕೊಂಡು ಬರ್ರಿ. ಗೋತ್ರ, ರಾಶಿ ನಕ್ಷತ್ರ ಎಲ್ಲಾ ಕೂಡಿಸೇ ಕೂಡಸತೀರಿ. ನೀವಿದ್ದ ಮ್ಯಾಲೆ ಕೂಡೂದುಲ್ಲೇ!

**ರಾಮಾಚಾರಿ:**— ಅವರದೇನೇನೂ ಚಿಂತಿಯಿಲ್ಲ. ಈಗಾಗಳೇ ಎಲ್ಲಾ ಕೂಡಿ ಹೋಗೇದ ಅಂತ ಹಿಡಿಕೋ—ಆತು—ಹಾಂಗಾರ—ಸ್ವಲ್ಪ ಚಂಚೀ ತಗೀಯಲ್ಲಾ.

(ಹೋಗುವರು; ತೆರೆ ಬೀಳುವದು)

## ೫ನೇ ನೋಟ:

[ಒಂದು ಬೀದಿ. ಮತ್ತೊಂದುದಿನ. ಸಿಪಾಯರ ಇಮಾಮನೂ ರಮಜಾನನೂ ಒಳ್ಳೇ ಡ್ರೇಸು ಹಾಕಿಕೊಂಡು ಒಬ್ಬರಹಿಂದೊಬ್ಬರು ಬರುವರು].

**ರಮಜಾನ:**—ಕ್ಯಾಬೇ ಇಮಾಮ್ ಕಹಾ ಚಲ್ಯಾ, ಇತನೀ ಡ್ಯೊಲಕರಕು.

**ಇಮಾಮ:**— (ಹಿಂದುರಿಗಿ)ತೂ ರಮಜಾನ ಕ್ಯಾಬಾ, ತೂ ಕಹಾ ಚಲ್ಯಾರೇ—

**ರಮಜಾನ:**—ವ್ಹೋ—ವೋ ಶ್ರೀಮಂತಾ ಹ್ಯೆನಹೀ—ವೋ ಸೊಲ್ಯಾಹೈ—'ಇವತ್ತ ಮಧ್ಯಾನ ವಖ್ತ್ಯಾಕ ಡ್ರೆಸ್ಸಗಿಸ್ ಐಟಾಗಿ ಹಾಕ್ಕೊಂಡ ತಯಾರಾಗಿ ಬಾ' ಕರಕು ಬೋಲ್ಯಾಹೈ—

**ಇಮಾಮ:**—ಮರ್ಶೋಭೀ ವೈಸಾಚ ಬೊಲ್ಯಾ. ವೈಭೀ ವಹಾಚ ಜಾತೂಂ. ಡ್ರೆಸ್ ಠೀಕ ಕರಕೆ ಆಯೇತೋ ಒಂದು ರೂಪಾಯಿ ಬಕ್ಷೀಸ ಕೊಡತೀನಿ ಕರುಕು ಬೋಲ್ಯಾಹೈರೇ ಮರ್ಶೋ.

**ರಮಜಾನ:**—ಮರ್ಶೋಭೀ ಠೀಕ ವೈಸಾಚ ಬೋಲ್ಯಾಹೈ. ಕ್ಯಾಬೇ, ಕಾಮ ಕ್ಯಾ ಹೈ ಉಧರ್—ವೈ ವೋ ಶ್ರೀಮಂತಾಸೇ ಪೂಛಾ, ಫಿರ್ ಅದನ್ನೆಲ್ಲಾ ತಗೊಂಡೇನ್ ಮಾಡ್ತಿ; ನಿನಗ ಭಕ್ಷೀಸ ಒಂದ ಸಿಕ್ಕಿರಾತಿಲ್ಲೋ ಕರಕು ಬೋಲ್ಯಾ—ವೈ, ಹು ರಾವಸಾಬ ಹಾಂಗೇ ಆಗಲಿ ಕರುಕು ಬೋಲ್ಯಾ.

**ಇಮಾಮ:**—ವೈ ಉಸಕಾ ಪತಾ ನಿಕಲ್ಯಾ ಹುಂ. ವೊ ಶ್ರೀಮಂತಾ ಜೋ ಹೈ ದೇಖ, ವೋ ಔರ ಏಕ ಶಾದೀ ಕರನೇವಾಲಾರೇ.

**ರಮಜಾನ:**—ವೋ ಶ್ರೀಮಂತಾ ದೇಖೋ ಇಮಾಮ ಬಹುತ ಬಡಾ ಹಂಡಬೆಕ್ಕೀರ್ ದೇಖೋ. ವೋ ನಿಂಗೀ ಉಸಕಾ ಪಾಸ ಹೊತ್ತೀ ನಹೀ—

**ಇಮಾಮ:**— ಹೊತ್ತೀ; ಫಿರ್ ಉಸಕೊ ಥೊಡಕೇ ಭಾಗ್ ಗಯೀ ಹೈ—ಔರ, ಏ ಶ್ರೀಮಂತಾ ಏಕ ಬಡಾ ಭಾರೀ ಘರಾಣೇದಾರ ಲಡಕೀಸೇ ಔರ ಭೀ ಏಕ್ ಶಾದೀ ಕರನೇವಾಲಾ—ವೋ ಬೇಟೀಕೀ ಭಾಯೀ ಆಜ ಏ ಶ್ರೀಮಂತಾಸೇ ಬಾತಚೀತ ಕರನೇಕೋ ಆನೇವಾಲೆ.

ಡ್ರೆಸ್‌ಪಸ್ ಇನ್ನಷ್ಟು ನೆಟ್ಟಗ ತಿದ್ದಿಕೊಂಡು ತಯಾರಾಗಿರು. (ಶ್ರೀಮಂತ ಮುಗುಳು ನಗೆಯಿಂದ ಹೊರಡುವನು) ಬಂಡ್ಯಾ ನೀ ಅಲ್ಲೆ ಕೂತು ಕೊಂಡಿರು ಅಲ್ಲೆ, ಕಾರಕೂನಾಗಿ. ಆ ಕೊಮಟರ ವೆಂಕ್ಯಾನ್ನವು ಖಾತೆಕಿರ್ದಿ ತಂದಿಟ್ಟೇನಿ. ಅವನ್ನಷ್ಟು ಅತ್ತಲಾಗಿತ್ತಲಾಗ ತಿರುವಿ ಹಾಕ್ಕೋತ ಕೂಡು. ಏನಾರ ಬರದ್ಹಾಂಗ ಮಾಡತಿರು. ನಾನೂ ಅಷ್ಟು ಐಟಾಗಿ ಬರತೇನಿ. (ಕೂಗುತ್ತ) ಏ ಇಮಾಮ್ಯಾ-- ಏ ರಮು ಜಾನ ಇಲ್ಲೆ ಬರ್‍ರಿಲೆ ಅಷ್ಟು ಒಳಗೇ (ಅವರು ಬರುವರು) ಸಲಾಂ ಮಾಡ್ರ್ಯೋ ಮಂಗ ನನ್ನ ಮಕ್ಕಳೇ (ಸಲಾಂ ಮಾಡುವರು) ಹಾಂಗಲ್ಲಾ; ನನಗ ಸಲಾಂ ಮಾಡ್ಲಿಕ್ಕೆ ಹೇಳಲಿಲ್ಲಾ. ನೀವು ಇವತ್ತಿನ ಪೂರ್ತೆ ನಮಗೇ, ಇಲ್ಲಿ ಬಂದವರಿಗೆ ಹೋಪವರಿಗೆ ಸಲಾಂ ಮಾಡತಿರಬೇಕು. ಜೀ ಸಾಬ, ಹೂ ರಾವಸಾಹೇಬ ಅಂತಿರಬೇಕು; ತಿಳೀತಿಲ್ಲೋ. ಅಂದರ ರೂಪಾಯಿ ಕೊಡುವಲ್ಲಿ ದೀಡರೂಪಾಯಿ ಕೊಡಸೇನಂತ! ಯಾಕೇ !! ಒಬ್ಬ ಇಲ್ಲೇ ಬಾಗಲ್ದಾಗಿರ್‍ರಿ, ಇನ್ನೊಬ್ಬ ಹೊರಗ ಅಂಗಳ್ದಾಗಿರ್‍ರಿ. ಯಾಕ; ಏನಂತೀನಿ! (ಸುಬ್ಬಣ್ಣ ಒಳಗೆ ಹೊರಡುವನು)

**ಇಬ್ಬರು:**— ಜೀ ಸಾಬ; ಹೂ ರಾವಸಾಬ.

**ರಮುಜಾನ:**— ಇಮಾಮ, ತೂ ಬಾಹಿರ ಜಾರೆ, ರಾವಸಾಬ ಮಝೆ, 'ಇಲ್ಲಿ ನಿಂದಿರ್‍ರಿ' ಕರಕೆ ಬೋಲ್ಯಾ.

**ಇಮಾಮ:**— ಕಾರೇ ಹರಾಮ್; ರಾವಸಾಬ ಮಝೆ ಇಲ್ಲಿ ನಿಂದ್ರಿರು ಬೊಲ್ಯಾ; ತೂಚ ಜ್ಯಾರೇ.

**ರಮುಜಾನ:**— ಕ್ಯಾಬೇ ಬದ್ಮಾಷ. ಮಝೆ ಬೋಲ್ಯಾ ಹೈ ಇಲ್ಲಿ ನಿಂದಿರ್‍ರಿ ಕರಕೆ; ತೂ ಜಾತಾ ಹೈ ಕಿ ನಹಿ. ತೂ ಬಹುತ್ ಅಡ್ನಾಡೀ ದೇಖರೇ.

**ಬಂಡೆಪ್ಪ**:— ಯಾಕ್ರೋ ಕತ್ತೀ ಮಕ್ಕಳ್ರ್ಯಾ—ಹೋಗ್ ಒಬ್ಬಾವ ಹೊರಗ.

**ರಮಜಾನ**:— ಜಾ. ಜಾರೆ, ಈ ರಾವಸಾಬ ಗಾಲ್ಯಾ ದೇಶಾ ಹೋಗಂತಾರ; ಜಾ ಜಾರೇ ಜಲ್ದೀ (ಇವನು ಹೋಗುವನು)

[ಇಬ್ಬರು ಮೂವರು ಹೆಂಗಸರು ಒಳ್ಳೆ ಒನಪಿನಿಂದ ಓಡಾಡುತ್ತ ಅತ್ತರದಾಣಿ ಗುಲಾಬದಾಣಿಗಳನ್ನು ಓರಣಿಸಿ ಹೋಗುವರು...... ಕೆಲಹೊತ್ತು ಶಾಂತ...... ಒಡನೆ, ಸುಬ್ಬಣ್ಣ ಒಳ್ಳೇ ಐಟಾಗಿ ಒಳಗಿನಿಂದ ಬರುವ. ಇತ್ತ ರಾಮಾಚಾರು ಗುಂಡೇ ರಾಯರು, ಶೇಷಾಚಾರು ಬರುವರು. ರಮ್ಜಾನನ ಸಲಾಂ.]

**ರಾಮಾಚಾರಿ**:— (ಒಳ್ಳೇ ಆಢ್ಯತೆಯಿಂದ) ಯಾಕೋ ರಮಜಾನ, ರಾಯರು ಇದ್ದಾರೇನು ಒಳಗ.

**ರಮಜಾನ**:— ಕೋನ್, ಶ್ರೀಮಂತ ರಾವಸಾಹೇಬ ಕ್ಯಾ, ರಾವ ಸಾಬ? ಶ್ರೀಮಂತ ರಾವಸಾಬ ಊಪರ ಹೈ—ಯೇ ಛೋಟಾ ಸುಬ್ಬಣ್ಣರಾವಸಾಬ ಯಹೀ ಹೈ—

**ರಾಮಾಚಾರಿ**:— ಯಾಕಣಾ ಸುಬ್ಬಣ್ಣಾ, ರಾಯರು ಏನು ಮಾಡುತಾರೋ—

**ಸುಬ್ಬಣ್ಣ**:—ಯಾರು ಶ್ರೀಮಂತರೇ ?—ಮ್ಯಾಲ ಮಲಕೊಂಡಾರ ಕಾಣಸ್ತದ—

**ರಾಮಾಚಾರಿ**:— ಹಂ. ಇರಲಿ. ಕರೀಯಲ್ಲಾ— ಇವರೇ ನಮ್ಮ ಶ್ರೀಮಂತರ ಬೀಗರಾಗವರು.—ಗುಂಡೇರಾಯರು –ಕನ್ಯಾದ ಅಣ್ಣ. ಇವರು ಇವರ ಮನೀ ಪುರೋಹಿತರು.—ಶೇಷಾಚಾರು.

**ಸುಬ್ಬಣ್ಣ**:— ಓಹೋ ನಮೋನ್ನಮ, ಬರ್ರಿ, ಹೀಂಗ ಬರ್ರಿ ಮ್ಯಾಲ, ಬರ್ರಿ. ಕೂಡಬರ್ರಿ. ಹಾಂಗ ಹ್ಯಾಂಗ ಆದೀತು ಶೇಷಾ

ಚಾರ, ಇತ್ತಲಾಗ ಮ್ಯಾಲ ಬರ್ರಿ. ಇಲ್ಲಿ ಕೂಡ್ರಿ ಇಲ್ಲಿ ಗಾದೀ ಮ್ಯಾಲೇ. ಹೂಂ ಕೂಡ್ರಿ. ನಮಗೇನು ನಡೀತದ. ನೀವು ಅತಿಥಿಗಳು.

( ಎಲ್ಲರೂ ಕೂಡುವರು. ಮತ್ತೆ ತುಸು ಹೊತ್ತು ಶಾಂತ )

**ರಾಮಾಚಾರಿ:—** ಮತ್ತೇನು ಸುಬ್ಬಣ್ಣ. ಇನ್ಯಾಕ ತಡಾ? ಶ್ರೀಮಂತನ್ನ ಕರೀಯಲಾ, ಮಾತಕಥೀ ಆಗಿಹೋಗಲಿ. ಯಾಕ, ಶ್ರೀಮಂತ ಇನ್ನೂ ತಯಾರಾಗಿಲ್ಲೇನು ?

**ಸುಬ್ಬಣ್ಣ:—** ಏನೆಷ್ಟು ಹೇಳಿದರೂ ಕೇಳಲಿಲ್ಲರೆಪಾ. ಯಾತಕ್ಕ ಒಣಾ ಡೌಲು, ತಯಾರಿ ಅಂತಾನ. ಅದರೊಳಗ ನಿನ್ನೆ ಆ ಲಕ್ಷಾಧೀಶರ ಗುರುರಾಯರು ದುಡ್ಡು ಮುಟ್ಟಿಸಿ, ತಮ್ಮ ವಸ್ತಾ ಬಿಡಿಸಿಕೊಂಡು ಹೋದರು. ಕೊಮಟ್ಗೇರ ಎಂಕಪ್ಪನೂ ಅಸಲೂ ಬಡ್ಡೀ ಮುಟ್ಟಿಸಿ ಲೆಕ್ಕಾ ಚುಕ್ತಾ ಮಾಡಿಕೊಂಡಾ. ಅದೇ ಲೆಕ್ಕಾ ಮಾಡಿಕೋತ ರಾತ್ರಿ ಹನ್ನೆರಡರ ತನಕಾ ಕೂತು ನಿದ್ದಿಗೆಟ್ಟ್ಯಾರ ಶ್ರೀಮಂತರು. ಮತ್ತ ಇವತ್ತ ಈಳಿಗೇರ ಈರಪ್ಪ ಲೆಕ್ಕಾ ಚುಕ್ತಾ ಮಾಡಿಕೊಳ್ಳಿಕ್ಕೆ ಬಂದಿದ್ದಾ; ಜಹಾಗೀರದಾರ ನಾರಾಯಣರಾಯರು ಮಗಳ ಮದಿವ್ಗೆ, ನಾಕೈದು ಸಾವಿರ ಸಾಲಾ ಕೇಳಲಿಕ್ಕೆ ಬಂದಿದ್ರು,—ತಮ್ಮ ಅಣ್ಣೀಗೇರಿ ಹೊಲಾ ವತ್ತಿಹಾಕೀ. ಅವರ್ನೆಲ್ಲಾ ಹಾಂಗೇ ಹಿಂದಕ ಕಳಿಸಿ ಬಿಟ್ಟೆವಿ. ಅದೇ ಲೆಕ್ಕದಾಗ ಕೂತಾನ ಬಂಡ್ಯಾ, ಇನ್ನೂ ಮುಗಿದಿಲ್ಲ ನೋಡಿರಿ. ಹೀಂಗ ದೊಡ್ಡ ಜವಾಬ್‌ದಾರಿ ಮೈಮ್ಯಾಲ; ಅಂತ ಶ್ರೀಮಂತಗ ಪುರಸತ್ತೇ ಇಲ್ಲಾ.

**ರಾಮಾಚಾರಿ:—** ನಾ ಶ್ರೀಮಂತಗ ಹ್ವಾದ ವರ್ಷಾನೇ ಹೇಳಿದೆ; ನಾಲ್ವತ್ತೂ ಕೂರಿಗಿ ಮನೀ ಕಮತದ್ಲೇನೇ ಮಾಡ್ಸೂದೇನ ಕಾರಣಾ; ಹನ್ನೆರಡೆಕ್ರೆನ ಕಮತಾ ಯಾಕೇ— ಅಂತ. ಅವಾ ಒಪ್ಯಾವಾ. ದೇಖು

ಶೇಖಿ ಸಾಲೂಮಲ್ಲ. ಇನ್ನೇ, ನಿನ್ನ ಪಗಾರಾ ಕೊಟ್ಟ ಇಟ್ಟಾನ ಖರೇ, ನೀ ಅರ ಎತ್ತಲಾಗಂತ ಸತ್ತೀ. ಮೇಲಾಗಿ ಅವಾಢವ್ಯ ಬಡ್ಡೀ ವ್ಯವಹಾರ; ಇನ್ನೊಂದಿಬ್ಬರ್ನ ಕಾರಕೂನರ್ನರೇ ಇಡು ಅನ್ನು. ಬಂಡ್ಯಾ ಮದ್ದು, ಇಬ್ಬರೇ ಸಾಕಾದೀತು ಹ್ಯಾಂಗ? — ಯಾಕ ಮದ್ದು ಎಲ್ಲಿ ಹೋಗ್ಯಾನ ಕಾಣ್ಸುದುಲ್ಲ ಇವತ್ತ.

**ಸುಬ್ಬಣ್ಣ:—** ಮದ್ದುನ್ನ ಹಳ್ಳೀಮ್ಯಾಲ ಕಳಿಸೇದ; ಬಡ್ಡೀ ವಸೂಲಿಗೆ. ಆ ಜೈನರ ಚಂದಪ್ಪನ ಮ್ಯಾಲೆ ದಾವೇನೇ ಮಾಡಬೇಕಾಗ ತದೋ ಏನೋ— ಬಡ್ಡೀನ ಎಂಟುನೂರು ಆಗಲಿಕ್ಕೆ ಬಂವದ್ರಪಾ. ಅದರೊಳಗ ನಮ್ಮ ಶ್ರೀಮಂತರು ಅಂಥಾ ತರಾತುರಿಯವರಲ್ಲಾ.

**ರಾಮಾಚಾರಿ:—** ಅದು ಮಾತ್ರ ಖರೇ ನೋಡು. ಇಷ್ಟಾದರೂ, ಶ್ರೀಮಂತ ಮಾತ್ರ, ಭಾಳ ಸಾದಾ ಮನಸ್ಯಾ. ಇದ್ದಾವಾ ಅಂತ ಗರ್ವ ಸೊಕ್ಕು, ಕಡಿಮಿ. ನಾಕಮಂದಿನ್ನ ಹಚ್ಚಗೊಂಬಾವಾ. **( ಗುಂಡೇರಾಯರು, ಶೇಷಾಚಾರೂ ಗುಣಗುಟ್ಟಹತ್ತುವರು. ರಾಮಾಚಾರಿ ಅವರ ಕಡೆ ನೋಡಿ. )** ಹಾಂಗಾರ, ಶ್ರೀಮಂತನ್ನ ಎಬ್ಬಿಸಿಕೊಂಡು ಬಾ. ಆಗಲಿ. ಹೊತ್ತಾಗೇದ. ವಿಶೇಷ ಏನು ತಯಾರಿ ಬ್ಯಾಡಾ. ಅಷ್ಟೇ ಸಾದಾ ದಿನಂಪ್ರತಿ ಡ್ರೇಸ್ಸು ಮಾಡಿಸಿಕೊಂಡು ಬಾ. ಅವಗೂ ವಿಶೇಷ ಬ್ಯಾಡೇ ಬ್ಯಾಡಾ.........ಅಲ್ಲೋ ಸುಬ್ಬಣ್ಣಾ, ಒಳಗ ಏನಾರ ತಯಾರಿ ಮಾಡಿಸೀದಿಲ್ಲೋ ?

**ಸುಬ್ಬಣ್ಣ:—** ಮಾಡಿಸೀನಿ. ಆದರೇನು ಒಬ್ಬ ಅಡಿಗೇಯಾವಾ, ಮಗಳ ಜಡ್ಡ ಅಂತ; ಆಯುತಾ ಊರಿಗೆ ಹೋದ; ಇನ್ನ ನಾರಾಯಣಚಾರಿಗೆ ಸೂತಕಂತ. ಅಂತ ಎಲ್ಲಾ ಹೆಂಗಸರ ಮ್ಯಾಲೇ ಬಿದ್ದೇದ.

**ರಾಮಾಚಾರಿ:**—ಆತ ಬಿಡು, ಮನಿತುಂಬ ಬೇಕಾದಷ್ಟು ಹೆಂಗಸ ರಿದ್ದಾರ—ಮಾಡ್ಯಾರು! ಏನು ದೊಡ್ಡ ಮಾತು!! ಆಗಲಿ, ಹೋಗು ರಾಯರ್ನ ಕರಕೊಂಡು ಬಾ.

( ಸುಬ್ಬಣ್ಣ ಹೋಗುವನು. ಗುಂಡೇರಾಯ, ಶೇಷಾಚಾರು ತಮ್ಮತಮ್ಮೊಳಗೆ ಮಾತಾಡುತ್ತಿರಲು, ಶ್ರೀಮಂತನನ್ನು ಕರಕೊಂಡು ಬರುವನು. )

**ರಾಮಾಚಾರಿ:**—ಬಾರಪಾ. ಶ್ರೀಮಂತಾ— ಹೀಂಗ (ನಮಸ್ಕಾರ ಚಮತ್ಕಾರದೊಂದಿಗೆ ಶ್ರೀಮಂತ ಕುಳಿತುಕೊಳ್ಳುವನು. ಮತ್ತೆ ಎಲ್ಲರಲ್ಲಿ ಗುಜು ಗುಜು ನಡೆಯುವದು)

**ರಾಮಾಚಾರಿ:**— ಸುಬ್ಬಣ್ಣಾ ( ಸುಬ್ಬಣ್ಣನು ಒಳಗ ನೋಡುವನು. ಒಳಗಿನಿಂದ ಭಾರೀ ಭಾರೀ ಸೀರೆಗಳನ್ನುಟ್ಟು, ವಸ್ತ್ರಗಳನ್ನು ತೊಟ್ಟ ಒಂದಿಬ್ಬರು ಹೆಣ್ಣು ಮಕ್ಕಳು ಫಲಾಹಾರಗಳನ್ನು ತಂದಿಡುವರು. ಫಲಾಹಾರ ನಡೆಯುವದು.) ಶ್ರೀಮಂತಾ—ನೀ ತಗೋಳಪಾ.

**ಶ್ರೀಮಂತ:**— ಆಗಲಿ ನಿಮ್ಮದೆಲ್ಲಾ ಆಗಲಿ, ಬಂದವರು, ಅತಿಥಿಗಳು—;

**ರಾಮಾಚಾರಿ:**—ಯಾಕ ಶೇಷಾಚಾರ ತಗೊಳ್ಳಲ್ರಿ ಚಹಾ ತಗೋತೀರಿ ಹೌದಲ್ಲೊ?

**ಶೇಷಾಚಾರು:**—ಓಹೋ, ಚಹಾ ನಿಷಿದ್ಧ ಅಂಬೂದು ಹೋಗೇ ಬಿಟ್ಟದಲ್ಲಾ—ಶಾಸ್ತ್ರದಾಗ...!!

**ಸುಬ್ಬಣ್ಣ:**—ಶಾಸ್ತ್ರದಾಗೇ ತಗದ ಬಿಟ್ಟಾರೇನು?

**ರಾಮಾಚಾರಿ:**— ಮತ್ತೇನು, ಸುಬ್ಬಣ್ಣಾ; ನೀಯಿನ್ನು ಹಳಬ ರ್‍ಯಾಂಗ ಮಾತಾಡ್ತೀದಿ. ( ಫಲಾಹಾರದ ನಂತರ ತಾಂಬೂಲಸೇವನೆ, ಅತ್ತರದಾಣಿ

ಗುಲಾಬದಾಣಿಗಳ ಲೇಪನ ಸಿಂಚನಗಳು ಮುಗಿದಮೇಲೆ...) ಆಗಲಿ, ಮತ್ತ ಶೇಷಾಚಾರರೇ ಅಂಬೋಣೇನು ?

**ಶೇಷಾಚಾರು:**—ಅಂಬೋಣೇನು ! ವರಾ ಅನಕಾ ಮದಲೇ ಮನಸಿಗೆ ಬಂದ್ಹಾಂಗ ಆಗೇದ- ಯಾಕ್ರೆಪಾ ಗುಂಡೇರಾವ್ (ಅವರು ಗೋಣು ಹಾಕುವರು) ಇನ್ನ ಮೂಹೂರ್ತ, ಯಾದಿ ಅಷ್ಟು ಗೊತ್ತು ಮಾಡಿದರಾತು.

**ರಾಮಾಚಾರಿ:**—ಮೂಹೂರ್ತೇನು, ಇಂದಿಗೆಂಟುದಿವ್ಸ, ಶನಿ ವಾರ ದ್ವಾದಶೀ ಮೂಹೂರ್ತಾನೇ. ಯಾಕಂದ್ರ ನಮ್ಮ ರಾಯರು, ಮತ್ತ ಮುಂದ ಜರೂರು ಅತ್ತಲಾಗ ಶಹಾಪೂರ ಸಾಂಗಲಿ ಮುಂಬೈ ಕಡೇ ಹೋಗಬೇಕಾದ. ಅವರಿಗೆ ನೋಡ್ರಿ ಇಪ್ಪತ್ತೆಂಟು ಕೆಲ್ಸ.

**ಗುಂಡೇರಾವ:**— ನಾವರೇ ಎಲ್ಲಿ ಬ್ಯಾಡಾಂತೀವಿ. ನಮಗೂ ಆದಷ್ಟು ಲಗೂ—ಅದಕೂ ಮದ್ಲೇ ಆದ್ರೂ ಬೇಕು. ಹೌದಲ್ರೀ ಶೇಷಾಚಾರ.

**ಶೇಷಾಚಾರು:**— ಹಾಂಗಾರ ದಶಮೀ ಮುಹೂರ್ತನೂ ಛಲೋನೇ ಅದ; ಅವತ್ತ ಆಗಿ ಹೋಗಲಿ. ಯಾಕ ರಾಮಾಚಾರ, ನಿಮ್ಮದೇನು ಅಡ್ಡೀ ಅದೇನು ?

**ರಾಮಾಚಾರಿ:**— ನಾವೆಲ್ಲಾ ಏನು ! ಶ್ರೀಮಂತರು ಹ್ಯಾಂಗ ಹೇಳತಾರ ಹ್ಯಾಂಗರೆಪಾ. ಅವರು ಮುಖ್ಯ ಯಜಮಾನರು; ನಮ್ಮಂಥಾ ನಾಕು ಕುಟುಂಬಾ ಹಿಡಿಯೂ ಸಾಮರ್ಥ್ಯ ಅವರದು, ಮತ್ತೇನು ರಾಯರು ಏನಂತಾರೇ—.

**ಶ್ರೀಮಂತ:**— ನಂದೇನು ಅಡ್ಡೀಯಿಲ್ಲ; ನೀವೆಲ್ಲಾ ಹಿರೇರು ಹೇಳಿಧಾಂಗ.

**ರಾಮಾಚಾರಿ**
**ಶೇಷಾಚಾರಿ** } ಹಾಂಗಾದ್ರ ದಶಮಿ ಮೂಹೂರ್ತಾನೇ ಠರಾಯಿಸಿಧಾಂಗ ಆತು.

**ಗುಂಡೇರಾಯ:**—ಹಾಂಗಾದ್ರ ಶೇಷಾಚಾರ, ಯಾದೀ ಅಷ್ಟ ಸಧ್ಯಕ್ಕ ಗೊತ್ತುಮಾಡಿ ಬಿಡೋಣ; ನಿಶ್ಚಯದ ಕೆಲಸಾ, ಶಾಸ್ತ್ರಕ್ಕ, ಇವರು ಒಂದ ದಿನ ಮದ್ಲೇ ಬಂದ ತೀರಿಸಿಕೊಳ್ಳಿ.

**ಶೇಷಾಚಾರು:**— ಅಷ್ಟೇ ಸರಿ; ಹುಡುಗೀ ಕೈಯ್ಯಾಗೊಂದು ಖಣಾ ಕೊಟ್ಟು ಉಡೀ ತುಂಬಿ ಬಿಟ್ರರಾತೂ.... ಇನ್ನೇ, ವರದಕ್ಷಿಣೇ, ವರೋಪಚಾರದ ಮಾತುಕಥೀಯಂತೂ ತೀರೇ ಹೋಗೇದ. ಅಂದ ಮ್ಯಾಲೆ ಈಗ ಯಾದಿ ಆಗಿ ಹೋಗ್ಲಿ...

**ರಾಮಾಚಾರಿ:**— ಆಗ್ಲಿ. ಶೇಷಾಚಾರೇ, ತಗೋಳ್ರಿ; ಬರೀರಿ (ಶೇಷಾಚಾರು ಬರೆಯಹತ್ತುವರು.) ...ಶ್ರೀ— ಅನ್ರಿ... ಲಕ್ಷ್ಮೀವೆಂಕಟೇಶ ಪ್ರಸನ್ನ......ಯಾದೀ...ಹೂಂ, ವರನ್ನ ಹೆಸರೂ......ಹೂಂ... ಆತೇ ?...ಕನ್ಯಾವ ಹೆಸರು......ಇವಳನ್ನು ಕೊಡೋದು ಗೊತ್ತು ಮಾಡೀ......ಕೊಡತಗೊಂಬೋದರ...ತಪಶೀಲೂ...ವಧುವಿಗೇ... ಹರಿದ್ರಾಕುಂಕುಮಾ...ಮಂಗಳಸೂತ್ರಾ...ಸುತ್ತಗಾಲುಂಗರಾಪಿಲ್ಲಾ ಭಂಗಾರದ್ದಾಗೀನೀ (ಇತ್ಯಾದಿ ಮಾತುಗಳು ನಡೆಯುತ್ತಿರಲು ತೆರೆ ಇಳಿಯುವದು.)

## ೭ ನೇ ನೋಟ: ಕವಡಗಂಟೆಳರು

[ ಶೇಷಾಚಾರು ಗುಂಡೇರಾಯ ]

**ಶೇಷಾಚಾರು:**— ಗುಂಡೇರಾಯಾ; ನೀನೂ ಭಾಳ ಸೋತ ಹೋಗೀ ನೋಡಪಾ. ಹಂದರ ಜ್ವರಾ !

**ಗುಂಡೇರಾಯ:**—ಹೋಗೀ ಮುಂದ ಕೂತಕೂತು ಮದುವಿ ಹ್ಯಾಂಗಾದೀತೋ ಅಂತ ಆಗಿತ್ತು. ಅಂತೂ ಸೀತೀ ಮದಿವಿ ಪಾರಾತೂ; ಸಾಕು.

**ಶೇಷಾಚಾರಿ:**—ನಮ್ಮ ಬಾಬು ಅಷ್ಟು ಪೂರಾ ಮುಟ್ಟಿಸಿರೆಲ್ಲಾ.

**ಗುಂಡೇರಾಯ:**—ಏನೋ ಶೇಷಾಚಾರಿ; ನಮ್ಮಪ್ಪ ಆ ಖೋಡಿ ಸೀತಿ ಹೆಸರ್ಲೆ ಐದುಸಾವಿರ ರೂಪಾಯಿ ಇಟ್ಟಿದ್ದಾ. ಅದನ್ನ ಅಷ್ಟೂ ಎತ್ತಿಹಾಕಬೇಕು ಅಂತ ಮಾಡಿದ್ವೆ. ಸಾಧಸಲಿಲ್ಲಾ. ನೀನೂ ರಗಡು ಸಹಾಯಾ ಮಾಡಿದೀ. ಆದರೂ ಪೂರಾ ಸಾಧಸಲಿಲ್ಲಾ. ಮೂರುಸಾವಿರ ರೂಪಾಯಿ ದಕ್ಕಿಸಿಗೋ ಬೇಕಾದ್ರು ಸಾಕ ಸಾಕಾಗಿ ಹೋತು; ಗೊತ್ತೇ ಅದೇ ಅಲ್ಲಾ.

**ಶೇಷಾಚಾರಿ:**—ಅಂತೂ ಇದರೊಳಗ ನಿಂನ ಹೆಂಡತಿ ಭಾಗೂ ಬಾಯೀ. ಮಸಲತ್ತೂ ಹರೇಮಿತನಾ ಕೂಡದಿದ್ದರ, ಇಷ್ಟರೇ ಎಲ್ಲೆ ನಮ್ಮ ಉಡೀಗೆ ಬೀಳತಿತ್ತು !!!

**ಗುಂಡೇರಾಯ:**— ಹೌದ್ ನೋಡು, ನನ್ನ ಹೆಂಡತೀನು ಮಹಾ ಹರೇಮಿ; ಗಂಡಸರಕಿಂತ ಸಾಹಸಾ ಆಕೀಮ.—ಆತು— ಈಗ ಅನಕಾ ಅಷ್ಟುಕೊಟ್ಟೇನೇ ? ಮತ್ತೀಗ ಇದಿಷ್ಟು ತಗೋ (ರೂಪಾಯಿ **ಕೊಡುವನು**); ಮತ್ತ ಹಿಂದಾಗಡೆಯುಷ್ಟು ಕೊಟ್ಟೇನಂತ.—ಅಲ್ಲದೇ ಇನ್ನೂ ಈಗ ಕೆಲಸೆಲ್ಲಾ ತೀರಿಲ್ಲಾ. ನಮ್ಮಪ್ಪಾ ಆ ಅರಿಷ್ಟ ಸೀತಿ ಹೆಸರ್ಲೆ, ಆ ಸುಣಗೇರಿ ಮೂರು ನಂಬ್ರ ಅವ ಅಲ್ಲಾ—ಆರನೂರು ರೂಪಾಯಿ—ಜಮೀನು;—ಅವನ್ನ ಆ ಸೂಳೇಮಗಳು ಸೀತಿ ಹೆಸರ್ಲೆ ನಮ್ಮಪ್ಪನ ಹೆಸರ್ಲೆ ಮಾಡಿಟ್ಟ್ಯಾನ. ಅದೊಂದು ಕಠೀಣಾ.

ಆಕಿ ಎಷ್ಟೆಂದರೂ ನನಗ ಮಲತಾಯಿ; ನಾಳೆ ನನಗ ಒಂದು ಕೂವಲೆಳಿ ಕೊಡೂದುಲ್ಲ. ಆ ಲೌಡೀ ಮಗಳು ಎಲ್ಲಾ ತನ್ನ ಮಕ್ಕಳು—ಈ ಸೀತಿ—ಆ ನಾನ್ಯಾಗ ಮಾಡಿಡತಾಳ. ಮ್ಯಾಲೆ ಆ ನಾನ್ಯಾ ನಂದ ರಾಗ ಪಾಲ ಬೇಡ ಅವನೇ—. ಅದಕ ಆ ನಾನ್ಯಾ ವಯಸ್ಸಿಗೆ ಬರೂದ ರಾಗ ಅವಷ್ಟು ಹೊಲಾ ದಾಟೆ ಹಾಕಬೇಕಾಗೇದ. ಆ ಸೀತಿಗನಕಾ ಏನು ಗೊತ್ತಿಲ್ಲಾ; ಗುರಾಚಾರಿಲ್ಲಾ

**ಶೇಷಾಚಾರಿ:**—ನಿಮ್ಮವ್ವನ್ನ ಸ್ವಲ್ಪ ಟೊಪಿಗಿ ಹಾಕಬಾರದೇ—ನೀನೂ ಬಲು ಅಳದಕ್ಕೀಯವನೋ,

**ಗುಂಡೇರಾಯ:**—ಹಾಂಗ ಮಾಡಲಿಕ್ಕೆ ಬರೂದುಲ್ರೀ ಆಚಾರಿ; ನಾನೂ ಭಾಳ ತಿಪ್ಪರಲಾಗಾ ಹಾಕಿದೆ. ನಮ್ಮವ್ವ ಬಲೇ ಜಬಟು; ಪೈಪೈ ಕೊಡೂದುಲ್ಲಾ. ಅದಕ್ಕ ಇದೆಲ್ಲಾ ಮತ್ತ ಆ ಸೀತೀ ಗಂಡಗೂ ಗೊತ್ತಾಗಬಾರದು—ಆ ಶ್ರೀಮಂತಗೇ—

**ಶೇಷಾಚಾರಿ:**—ಏನು ಶ್ರೀಮಂತಪಾ! ಬಲು ಹೆಪ್ಪೀ ಬಿದ್ದೆವಲ್ಲ ನಾವೂ, ಅವನ ಅಂದಿನ ಆಡಂಬರಕ—!! ಆ ಸೂಳೇಮಗ್ಗ ಮಧ್ಯಾಹ್ನಕ್ಕ ಗತೀಯಿಲ್ಲಂತ. ಅಂಥಾವಗ ನಮ್ಮ ಸೀತಕ್ಕನ್ನ ಎರಡ ಸಾವಿರಾ ಕೊಟ್ಟು ಕೊಟ್ಟೆವಿ. ಹುಚ್ಚರಲ್ಲ ನಾವು!

**ಗುಂಡೇರಾಯ:**—ಆತ ಬಿಡು—ಆ ಸೀತೀ ದೈವಾ! ನಾವೇನು ಮಾಡೋದು. ಭೋಗಸೂವಾಕಿ ಆಕಿ! ಆಕೀ ಹಣೇಬರಹದಾಗೇ ಹಾಂಗ ಬರದಿತ್ತು. ಬ್ರಹ್ಮಸಂಕಲ್ಪಾ—ಅಂದಮ್ಯಾಲ ಅದನ್ನ ತಪ್ಪಿಸ ಲಿಕ್ಕೆ ನಾವೆಷ್ಟರವರು! ಆ ಸೀತೀ ಬಾಸಿಂಗ ಬಲಾನೇ ಹಾಂಗಿತ್ತು! —— ಹಾಂಗಾತೂ!! ಇಷ್ಟೇ, ಆ ಎರಡು ಸಾವಿರಾ ಕಳಕೊಂಡಿವೀ—ನಮ್ಮ ಹಣೇಬರಹಾ!!! (ಹೋಗುವರು: ತೆರೆಯೇಳುವದು)

## ೮ನೇ ನೋಟ : ಹರಕೆಯ ಕುರಿ

[ ಮದುವೆಯಾದ ಒಂದುವರ್ಷದ ಮೇಲೆ ಚಾವಡಿಯ ಬಂಕದಲ್ಲಿ ಸುಬ್ಬಣ್ಣ ಮದ್ದ್ಯ, ಬಂಡೆಪ್ಪ ಮೊದಲಾದವರು ಹರಟೇ ಹೊಡೆಯುತ್ತ, ಎಲೆ ತಂಬಾಕು ಹಾಕಿ ಕೊಳ್ಳುತ್ತ ಕುಳಿತಿರುವರು...... ]

**ಸುಬ್ಬಣ್ಣ**:—ಅಂತೂ ನೋಡು, ಮದ್ದ್ಯಾ, ರಾಮಾಚಾರೀಯಂಥ ಹರಕರು ಭೂಮಿಮ್ಯಾಲೆ ಯಾವ್ಯಾವನೂ ಇರಲಿಕ್ಕಿಲ್ಲ ನೋಡು !

**ಮದ್ದ್ಯಾ**:—ಅದ್ಯಾಕೆ ಓ ಸುಬ್ಬ್ಯಾ; ನೀ ಹೀಂಗ ಅಂತೀದಿ ? ನಿನಗೂ ಅವಗೂ ಕೇನಲಾ.

**ಸುಬ್ಬಣ್ಣ**:—ಎಲ್ಲೀ ಕೇವಲೋ ? ಎಲ್ಲಾ ಮಕ್ಕಳೂ ಹಾಂಗ್ಹಾಂಗೇನೋ ಈ ಜಗತ್ನ್ಯಾಗೇ ! ನಾವೂ ನೀವು ನೆಂಟರು, ಕಂಟ್ಲಗೆ ಮಾತ್ರ ಕೈ ಹಾಕ ಬ್ಯಾಡ್ರೀ ಅಂಬಾವ್ರೇ ಭಾಳು.

**ಬಂಡೆಪ್ಪ**:—ಅಂದಲ್ಲೇ, ತಾಮ್ರುದ್ದ್ಬಡ್ಡ ತಾಯೀ ಮಕ್ಕಳ್ನ ಕೆಡಿಸ್ತು ಅಂತಾರ ಮಾತಿನ ಮುಂದ. ಅಂದ್ಮ್ಯಾಲೇ, ನಿಮಗೇ ರಾಮಾಚಾರ್ಗೇ, ಫಾರೀಕತ್ತು ಆದದ್ದರೊಳಗ ಹೆಚ್ಚೇನೂ...?

**ಸುಬ್ಬಣ್ಣ**:—ಫಾರಿಕತ್ತು ಅನಬ್ಯಾಡಪಾ. ಅವನ್ಸಂಗ್ತೀಲೇ ಫಾರೀ ಕತ್ತು ಮಾಡಿಕೊಂಬೋ ಹಾಂಗಿಲ್ಲಾ. ಏನೇ ಆದ್ರೂ ನಾವು ಅವನ ಮರ್ಜೀ ಹಿಡೀಲಿಕ್ಕೇ ಬೇಕು. ಪೂಜಾರೀ, ಜೊಯ್ಸ್ಯಾ, ಮ್ಯಾಲ ವೈದ್ಯಕೀ ಅಂತ ಮೂರು ನಾಕು ಸೋಗ ಅವನ್ನವು. ಇಡೀ ಊರಿಗೆ ಊರ್ಮೇ ಬಗಲಿಗೆ ಹಾಕ್ಯಾನ !

**ಮದ್ದ್ಯಾ**:—ಅದಕೇ ಸಾ; ಹೊತ್ತು ಬಂದಾಗ ಕತ್ತೀಕಾಲು ಹಿಡೀ ಬೇಕಂತ.

**ಸುಬ್ಬಣ್ಣ:**—ಆತು ಬಿಡು ಮಾರಾಯಾ; ಇಷ್ಟುದಿನ ಹಿಡಿದು ಹಿಡಿದು ಬ್ಯಾಸರ ಬಂತು. ನರಗುಂದ ಜಕಾತಿಕಟ್ಟೀ ಕೆಲ್ಸಾ ಕೊಡ ಸ್ತೇನಿ ಅಂತ ಮೂಗ್ಗೆ ತುಪ್ಪಾ ಹಚ್ಚಿ ಕೂಡಿಸಿದಾ ಮೊದ್ಲ. ಅಂತ ಆ ಶ್ರೀಮಂತನ ಮದ್ವೀ ಹೊಲಾ ಮಾರಿಸಲಿಕ್ಕೆ ನಾನೂ ಮಾಡಬಾರದ್ದು ಮಾಡಿದೆ. ಮಗಾ ಹೊಲಾ ನೆಗಿವಿ ಹಾಕಿದಾ. ಅತ್ಲಾಗ ಶ್ರೀಮಂತನ್ನು ಅರ್ಧಾ ಹಣಾ ಮುಣುಗಿಸಿದಾ. ಇತ್ಲಾಗ ನನ್ನ ಕಣ್ಣಿಗೂ ಇಂಗ ಹಚ್ಚಿದಾ.

**ಬಂಡೆಪ್ಪ:**— ಬಿಡೋ ಮಗನೇ—ಮತ್ತ ಆ ನಿಂಗೀದೂ ಶ್ರೀ ಮಂತನ್ದೂ ಫಾರಿಕತ್ತು ಮಾಡಸಬೇಕಾವ್ರ ನಿನಗ ಇನ್ನೂರುರೂಪಾಯಿ ಕೊಟ್ಟಾನಂತಲ್ಲಾ ರಾಮಾಚಾರಿ.

**ಸುಬ್ಬಣ್ಣ:**—ಎಲ್ಲೀದಪಾ ಮಾರಾಯಾ! ಒಮ್ಮೆ ಇಪ್ಪತ್ತು ಕೊಟ್ಟಾ ಒಮ್ಮೆ ಒಂದ ಹತ್ತು ಕೊಟ್ಟಾ ಆತು, ಆ ರಾಮಾಚಾರೀ ಮರ್ಜೀ ಕಾಯ್ಕೋಬೇಕು ಅಂತ ನಾನೂ ಹಾಂಗ ಹೇಳ್ತಿದ್ದೆ, ಅಷ್ಟೇ. ಈಗ ನೋಡೀಗ ಬಣ್ಣ ಹೊರಬಿತ್ತಲ್ಲಾ.

**ಮಧ್ವೂ:**—ಸುಬ್ಬ್ಯಾ. ನಿನ್ನಂಥಾ ಸೋಗಲಾಡಿನ್ನ ನಾ ಕಾಣ ಲಿಲ್ಲೋ—ಇಕಾ ಇಲ್ಲೆ ಹೇಳು; ಆ ಶ್ರೀಮಂತನ ಮದಿವ್ಯಾಗ ಎರಡು ಸಾವಿರ ವರದಕ್ಷಿಣೆ ಬಂತಂತಲ್ಲಾ; ಅದರಾಗ ನೀನೂ ರಾಮಾಚಾರೀನೂ ಎಷ್ಟೆಷ್ಟು ಎತ್ತಿಹಾಕಿದ್ರೀ? ಹೇಳು! ಖರೇ ಹೇಳಬೇಕು! ನೋಡು ಮತ್ತ, ಸುಳ್ಳು ಬಿದ್ದೀ ಅಂದ್ರ ನಿನ್ನ ಚರಟಾನೇ ಬೆಳಗೇನು! ದೇವರಾಣೇ ಮಾಡಿ ಹೇಳು.

**ಬಂಡೆಪ್ಪ:**—ನಿಮ್ಮ ಕುಲದೇವರಾಣೇ ಮಾಡಿ ಹೇಳು.

**ಸುಬ್ಬಣ್ಣ**:—(ತನ್ನೊಳಗೆ) ಒಳೇ ಸಂಕಟ ಬಂತಲ್ಲಾ;—ಆಗ್ಲೀ ಈ ಮಕ್ಕಳಿದ್ದದ್ರೂ ಏನು ಹಂಗ ನನಗ? ಎಷ್ಟು ಅಂದ್ರೂ ರಾಮಾಚಾರಿ ನಾನೂರು ರೂಪಾಯಿ ಕೊಟ್ಟಿದ್ದು ಸುಳ್ಳಾದೀತೇನು ? ಏನೇ ಆಗ್ಲೀ; ನನ್ನ ಕಣ್ಣಿಗೆ ಎಷ್ಟೇ ಇಂಗ ಹಚ್ಚಿದ್ರೂ, ಸಾವಿರ ಪಾಲಿಗೆ ರಾಮಾಚಾರೀನೇ ಬೇಕು. ಇಲ್ದಿದ್ರ ನಮ್ಮಂಥಾ ಕಂಗಾಲರಿಗೆ ಇಷ್ಟಾದ್ರೂ ದುಡ್ಡು ಕೊಡಾವ ಯಾವಾ?—ಆಗ್ಲೀ ಈ ಮಕ್ಕಳಿಗೆ ಅದರ ತಪಶೀಲು ಹೇಳಿ ಉಪಯೋಗೇನು?—(ಅವರಿಗೆ) ಮುದ್ಧಾ, ಬಂಡೆಪ್ಪಾ, ನಿಮ್ಮ ಮುಂದ ಇವತ್ತು ಜೀವಾ ಹೋಗ್ತದ ಅಂದ್ರ ನಾಯೇನ್ ಸುಳ್ಳು ಹೇಳಾವಲ್ಲ. ಇಕಾ, ತಗೋಳ್ರಿ, ದೇವರಾಣಿ, ಕುಲದೇವರಾಣಿ, ನಮ್ಮಪ್ಪ ಆಣಿ, ನಮ್ಮವ್ವನ ಆಣಿ, ಖರೇ ಅಂದ್ರು ರಾಮಾಚಾರಿ ಆ ವರದಕ್ಷಿಣಿ ಪೈಕೀ ನನಗ ಕೊಟ್ಟದ್ದೂ—ಎಪ್ಪತ್ತೈದೂ, ಒಂದ–ಇಪ್ಪತ್ತಮ್ಕರೂ, ಒಂದು ಮೂವತ್ತ್ಯೇಳು–ಅಂತೂ ನೂರಾ ಮೂವತ್ತೈದು -ರೂಪಾಯಿ–ನನಗ ಕೊಟ್ಟದ್ದು–ಇಷ್ಟೇ. ತಾನು ಮಾತ್ರ, ಹನ್ನೊಂದು ನೂರು ರೂಪಾಯಿ ಗಪ್ಪೇ ಮಾಡಿದಾ. ಶ್ರೀಮಂತಗ ಸುದ್ಧಾ ಅದರ ಜಾಡ ಹತ್ತಗೊಡಲಿಲ್ಲ—

**ಬಂಡೆಪ್ಪ**:—ಏನೂ? ನಿನಗ ಬರೇ ನೂರಾ ಮೂವತ್ತೈದು ರೂಪಾಯೇ?—ಖರೇನೇ–ನೋಡು ಆಣೇ ಹಾಕಿಕೊಂಡೀ—

**ಸುಬ್ಬಣ್ಣ**:—ಖರೋಖಟ್ಟಿ–ಅದರೊಳಗ ಸುಳ್ಳಂಬೋದು ಕೇಳ ಬ್ಯಾಡಾ—(ತನ್ನೊಳಗೆ) ಆಣೇನು ಬಂದು ನಮಗ ಬಡಕೋತಾವೇನು ಸೂಳೇಮಗನ್ನವು?— ನಮ್ಮವ್ವಾ ನಮ್ಮಪ್ಪಾ ಸತ್ತು ಹತ್ತ ವರ್ಷಾತು.—

**ಮುದ್ದ್ಹ:**—ಅಲ್ಲೋ ಸುಬ್ಬ್ಯಾ—ಮತ್ತೀ, ಆ ರಾಮಾಚಾರೀ ಆ ಶ್ರೀಮಂತನ ವರದಕ್ಷಿಣೀ ಪೈಕಿ ಹನ್ನೊಂದು ನೂರು ರೂಪಾಯಿ ಎತ್ತಿ ಹಾಕಿದಾ ಅಂತೀದೀ—ಅಂದ್ರೂ, ಆ ಶ್ರೀಮಂತಾ ಮತ್ತ ಆ ರಾಮಾ ಚಾರೀ ಬಾಲಾನೀ ಬಡೀಲಿಕ್ಕೆ ಹತ್ಯಾನಲ್ಲಾ. ಅದರ ಗುಟ್ಟೇನಪಾ

**ಸುಬ್ಬಣ್ಣ:**—ಗುಟ್ಟೇನು ಗುಟ್ಟು; ತಿಳದೀ ಅದ ಅಲ್ಲಾ—ಮದಿವಿ ಆಗಿ ಒಂದ ವರ್ಷಾತೂ; ಶ್ರೀಮಂತಗ ಹೆಂಡ್ತೀನ್ನ ಇಟ್ಟುಕೊಂಡು ಬಾಳ್ವೆ ಮಾಡಬೇಕಂದ್ರ ಮಾಧ್ಯಾನ್ಹಕ್ಕ ಗತಿಯಿಲ್ಲಾ—ಅಂತ ಅದಕ್ಕೆಲ್ಲಾ ರಾಮಾಚಾರೀ ಮರ್ಜೀ ಹಿಡೀತಾನೀ. ರಾಮಾಚಾರಿ ಶ್ರೀಮಂತಗ ಟೊಪಿಗೀ ಹಾಕ್ತಾನೀ—ಇಬ್ಬರೂ ಕೂಡಿ ಮತ್ತೊಬ್ಬರಿಗೆ ಹಾಕ್ತಾರೀ! ಮತ್ತೇನು—?—ಅಕಾ—ರಾಮಾಚಾರೀ ಇತ್ಲಾಗ ಚಾವಡೀ ಕಡೇನೀ ಬರ್‍ತಾನ; ನೋಡ ಅಲ್ಲೇ—ಎಲ್ಲಾ ಗುಟ್ಟು ಹೊರಗೆಡವ್ತೋಣ—ತಡೀ— (ರಾಮಾಚಾರಿ ಬರುವನು) ಒಹೋ—ಹೋ—ಈ—ಈ—ಬರಬೇಕು ರಾಮಾ ಚಾರೀ—ಯಾಕ ಇವತ್ತ ತಡಾ ಮಾಡಿದ್ರಿ ಚಾವಡೀ ಕಡೇ ಬರ್‍ಲಿಕ್ಕೇ—!

**ರಾಮಾಚಾರಿ:**—ಆ—ಕಲವಳ್ಳೀ ತಿರಕಪ್ಪಾ—ಇದ್ದಾನಲ್ಲಾ—ಅವರ ಅವ್ವನ ಶ್ರಾದ್ಧ ಅಂತ ನಾಳೀ; ಅದಕ್ಕ ತಮ್ಮೂರಿಗೆ ಬರಬೇಕೂ ಅಂತ ಆಮಂತ್ರಣಾ ಹೇಳ್ಲಿಕ್ಕೆ ಬಂದಿದ್ದಾ.

**ಬಂಡೆಪ್ಪಾ:**—ಆ ಶ್ಯಾನಭೋಗರ ತಿರಕಪ್ಪನೇ?

**ರಾಮಾಚಾರಿ:**—ಹೂಂ; ಅವನೇ. ದೀಡ ರೂಪಾಯಿ ಕೊಟ್ಟರ ಬರ್‍ತೇನಿ ಇಲ್ಲಿದ್ರ ಇಲ್ಲಾ ಅಂದೆ. ಭ್ರಾಂಬ್ರ ಆದ್ರು ಇವರ್‍ಗೇನು ಹಾದೀ ಮ್ಯಾಲ ಬಿದ್ದೇವೇನು ನಾವು.

**ಮುದ್ದ್ಹ:**—ಅವಾಯೇನು ದೀಡ ರೂಪಾಯಿ ಕೊಡ್ತಾನಿ,. ಮುಹಾ ಜೀನಹಂಕಾ!

**ರಾಮಾಚಾರಿ:**—ಕೊಡದೇ ಪದಾ ಹೇಳ್ಯಾನು! ನಾ ಬಿಡ್ತೇನೇನು. ನಾ ಅಂದ್ರೇನು ? ಜಿ:ನರಿಗೆ ಹತ್ತ್ರೋ ಜೀಗಳಿ ನಾನು. ಸುತ್ತ ಎಂಟ ಹರದಾರ್ಯಾಗ ನಂನ್ನಂಥಾ ಬ್ರಾಂಹ್ಣ ಸಿಕ್ಯಾನೇನು ಅವಗ, ಅವರವ್ವನ ಶ್ರಾದ್ಧಕ್ಕ?!! ಕರೀಲಿಕ್ಕೆ ಛಕಡೀ ಕಳ್ಸಬೇಕು—ಎಂಟಾಣೆ, ಮುಂಗಡಾ ಕೊಡಬೇಕು ಅಂತ್ಹೇಳೇನಿ.

**ಬಂಡೆಪ್ಪ:**— ಕಾಗದ ಪತ್ರಾ ಮಾಡ್ಸಿಗೋಬೇಕಿಲ್ಲೊ ?

**ಸುಬ್ಬಣ್ಣ:**— ರಾಮಾಚಾರ ಮುಂದ ಓಡೋವ್ರು ಯಾರ್ರೀ ? ಹಾರೋ ಹಕ್ಕೀ ಪುಚ್ಚಾ ಎಣಿಸ್ಯಾರು? ಆ ಶ್ರೀಮಂತನ ಮದ್ವೀ ಹೊಲಾ ಮಾರುವಾಗ ಎಸ್ಟ ಕಾಗದಪತ್ರ ಇದ್ದೇನು ಮಾಡಿದ್ರು!! ಯಾಕ್ರೀ ರಾಮಾಚಾರೀ ?

**ರಾಮಾಚಾರಿ:**—ಹ್ಹ, ಹ್ಹ, ಹ್ಹ ಹ್ಹ, ಹ್ಹ,——ಆ ಶ್ರೀಮಂತ ಯಾನ ಗಿಡವ ತೊಪ್ಪಲೋ ಸುಬ್ಬಾ!——ಈಗೆನ್ನೀಡು ಹ್ಯಾಂಗ ಮತ್ತ ನನ್ನ ಕೈಕಾಲು ಕಟ್ಟಿಗೋಳ್ಳಿಕ್ಕೆ ಹತ್ಯಾನ—!—!——

**ಬಂಡೆಪ್ಪ:**— } ಅದ್ಯಾಕ್ರೀ ರಾಮಾಚಾರ, ಅದೇನ್ಕಾರಣಾ? ಅವಾ,
**ಮುದ್ದೂ:**— } ಅಷ್ಟ್ಯಾಗೀ ನಿಮ್ಮ ಮರ್ಜೀ ಹಿಡಿಯೋದೇನು ?

**ರಾಮಾಚಾರಿ:**—ಹಿಡೀದೇ ಏನ್ ಝುಕ್ಕಸ್ತ್ಯಾನೀ—? ಅಶನಕ್ಕ ಗತಿ: ಒಂದ ಬೇಕಲ್ಲಾ. ತನಗ ತಿನ್ನಲಿಕ್ಕೆ ಗತಿಯಿಲ್ಲದ ಈಗೆಂಟು ತಿಂಗಳಾತೂ, ಹೆಂಡ್ತೀನ್ನ ತವರಮನೀಗೆ ಅಟ್ಟಿ ಬಿಟ್ಯಾನೀ——; ಮತ್ತ ಮೊದ್ಲಿನ ಹಾಂಗ ಬಾಯ್ ಬಿಡ್ಲೀಕ್ಕೆ ಹತ್ಯಾನೀ —. —ಅಕಾ —ಅಲ್ಲೋದ್ರೀ—ಶ್ರೀಮಂತಾ—ನಮ್ಮೂರ ಶ್ರೀಮಂತಾ—ನಮ್ಮ ಸೀಮೀ ಶ್ರೀಮಂತಾ ಹ್ಯಾಂಗ ಬರ್ಲಿಕ್ಕೆ ಹತ್ಯಾನ!!

[ಇದೇ ಹೊತ್ತಿಗೆ ಶ್ರೀಮಂತನು ಬರುತ್ತಾನೆ. ಮೈಯಲ್ಲಿ ಒಂದು ಶರ್ಟು; ಗುಂಡಿಗಳು ಇದ್ದರೂ ಎಲ್ಲಾ ಹಾಕಿಲ್ಲ; ಕೈಗುಂಡಿಗಳ ಬದಲು ದಾರ ಕಟ್ಟಿದೆ. ಕರೀ ಬಣ್ಣದ ಮದ್ರಾಸ ಚೆಕ್ಕಿನ ಹಳೇಕೋಟು; ಬೆನ್ನಲ್ಲಿ ಹಿಗ್ಗಿಸಿ ಹೊಲಿಸಿದ್ದು; ಕೋಟಿನ ಅಂಚಿನಲ್ಲಿ ಕೂಸರುಗಳಿದ್ದಿವೆ. ಉಟ್ಟಿದ್ದು ಅಂಚಿಲ್ಲದ ಧೋತರ; ಹೊಲಸು ಹೊಲಸಾಗಿದೆ. ತಲೆಯ ಮೇಲೆ ಹೇಗೋ ಸುತ್ತಿದ ರುಮಾಲು ಅಸ್ತವ್ಯಸ್ತವಾಗಿದೆ; ಅದರ ಸಂದಿಯೊಳಗಿಂದ ಚಂಡಿಕೆಗಳು ಹೊರಬಿದ್ದಿವೆ. ಕಾಲಲ್ಲಿ ಕಟಬಾಯಿಹರಕ ಹಳೇ ಪಂಚ್ಜಿಗಳು. ಮೋರೆಯ ಮೇಲೆ ಕಪ್ಪು ಬಹಳ ಬೆಳೆದು ಬಿಟ್ಟಿದೆ. ತುಟಿಯ ಮೇಲೆ ಚಪ್ಪರದಂತೆ ಮೀಸೆಗಳು ಮುಸುಕಿಕೊಂಡಿವೆ. ಕೈಯಲ್ಲಿ ಮಾಸಿದ ಚಂಚಿ.]

**ಸುಬ್ಬಣ್ಣ** (ಮೊದಲಾದವರು):— ಓಹೋ! ಬಾರಪಾ ಶ್ರೀಮಂತಾ,

**ರಾಮಾಚಾರಿ:**— ಬಾರಪಾ ಶ್ರೀಮಂತಾ, ಹೀಂಗ ಬಾ ಇತ್ಲಾಗ. ಈಗ ನಿಂದೇ ಮಾತು ಹೊರಟಿತ್ತು. ನೆನಸೂದ್ರಾಗ ಬಂದೇ ಬಿಟ್ಟೆಲ್ಲಾ! ಪೂರಾ ನೂರುವರ್ಷ ಆಯುಷ್ಯ ನೋಡು ನಿನಗ!

**ರಾಯರು:**— ಏನು ಮಾಡೋದು ರಾಮಾಚಾರೀ, ನೂರು ವರ್ಷದ ಆಯುಷ್ಯ ತಗೊಂಡೂ! ಅದೇನೊ ಅಂತಾರಲ್ಲಾ—ಹಾಂಗ–

**ಸುಬ್ಬಣ್ಣ:**—ಹಾಂಗ್ಯಾಕರೀ ಶ್ರೀಮಂತರೇ—ಮೊನ್ನೆ ಮದ್ವೀ ಮಾಡಿಕೊಂಡ್ರಿ. ಹೊಸಾ ಹೆಂಡ್ತೀ ಸಂಸಾರ. ಇಷ್ಟಕ್ಕ ನೀವು ಹೀಂಗ ಕೈ ಊರಿದರ ಹ್ಯಾಂಗಾದೀತೂ.

**ರಾಯರು:**— ಸುಬ್ಬಣ್ಣಾ, ಇನ್ನಾದರೂ ಚ್ಯಾಷ್ಟೀ ಮಾಡೋದು ಬಿಡ್ತೀವಲ್ಲ್ಯೋ? ನನಗನಕಾ ಸಾಕಾಗಿ ಹೋಗೇದ. ಈ ಮದ್ವಿಯಾ ಮಗ್ಗ ಬೇಕಾಗಿತ್ತು!

**ರಾಮಾಚಾರಿ:**—(ತನ್ನೊಳಗೆ) ನಿನಗ ಬೇಕಾಗದಿದ್ರೂ ನನಗ ಬೇಕಾಗಿತ್ತು (ಹೊರಗೆ) ಇರ್ಲಿ, ಬಿಡೋ ಸುಬ್ಬ್ಯಾ—ಬಿದ್ದ ಪೆಟ್ಟೊಂದು ನಕ್ಕ ಪೆಟ್ಟೊಂದೂ ಅಂಬೂ ಹಾಂಗ ಮಾಡಬಾರ್ದಪಾ. ನೊಂದ ಬಟ್ಟೀ ನೊಯ್ಸೂದೇನು ಛಲೋ ಅಲ್ಲಾ. ಈಗ ನೋಡು; ಪಾಪ, ಶ್ರೀಮಂತಾ ಯೇನು ಮಾಡಬೇಕೂ. ಮದ್ವೀ ಮಾಡಿಕೊಂಡು ಸಂಸಾರ ಸುಸೂತ್ರ ಆದೀತು ಅಂತ ಮಾಡಿಕೊಂಡಾ. ನಾವೂ ಎಲ್ಲಾರೂ ಅಂತಿದ್ವಿಲ್ಲ—— ಇನ್ನೇನಪಾ ನಮ್ಮ ಶ್ರೀಮಂತ ದೈವುಳ್ಳವರ ಮಗಳ್ನ ಮದವಿ ಆದಾ; ಅವನ ಕೈ ಹಿಡಿಯುವವರ್‍ಯಾರು—ಇನ್ಮ್ಯಾಲೆ ನಮ್ಮ ನ್ನೆಲ್ಲಾ ಅವಾ ಮಾತಾಡಿಸ್ಸ್ಯನ್ಯಾಕೇ——ಅಂತ. ಆದ್ರ ಮುಂದ ಹೀಂಗ ಆದೀತು ಅಂತ ಯಾರು ಕಂಡಿದ್ರು. ಈಶ್ವರೀ ಸಂಕೇತಾ ಅಂದ್ರ ಮನುಷ್ಯನ ಶಕ್ತಿ ಮೀರಿದ್ದು———ನಮ್ಮ ನಮ್ಮ ಪಾರಬ್ಧದ ಮುಂದ ನಮಗೋಡ್ಲಿಕ್ಕೆ ಬಂದೀತೇ?———ನೋಡು.

**ರಾಯರು:**—ರಾಮಾಚಾರೀ, ಅದೆಲ್ಲಾ ಹೋಗ್ಲಿಪಾ. ಈಗ ನನಗೇನು ಮಾಡಂತೀ ಹೇಳು. ನನ್ನ ಮದ್ವೀ ಹೊಲಾ ಮಾರಿಸಿದೀ, ಪೂರಾ ರುಪಾಯಿ ಇನ್ನೂ ಮುಟ್ಟಿಸಲಿಲ್ಲಾ; ವರದಕ್ಷಿಣಿ ಎರಡು ಸಾವಿರ ರುಪಾಯ್ದಾಗ ನನ್ನ ಕೈಗೆ ಬಂದದ್ದವು ಐದಾರುನೂರು. ಹೀಂಗ - ನೀನ—ೕ—ಕೂತು————

**ರಾಮಾಚಾರಿ:**— (ನಡುವೆ ಬಾಯಿಹಾಕಿ) ಶ್ರೀಮಂತಾ——ಹಾಂಗ ಮಾತ್ರ ಅನಬ್ಯಾಡ ನೋಡು. ಹುಟ್ಟಿ ಜನ್ಮಾ ಒಬ್ಬರ ರುಣಧಾಗ ನಾ ಬೆಳದಾವ ಅಲ್ಲಾ. ನಾನೂ ಏನೋ ಆಚಿನಾಗ ಇದ್ದೆ ಅಂತ ನಿನ್ನ ರೂಪಾಯಿ ಬಳಿಸಿಕೊಂಡೆ; ಅದೂ ನಿನ್ನ ರೂಪಾಯಿ ಅಂತ ಬಳಿಸಿಕೊಂಡೆ. ಮತ್ತೊಬ್ಬರದಾಗಿದ್ರ ನನಗ ಹಾಂಗ ಧೈರ್ಯಾನೇ

ಇರ್ರ್ತಿಸ್ಲಿಲ್ಲಾ. ನಿಂದೂ ನಂದೂ ಮೊದಲ್ನಿಂದ ಹತ್ತಗಡಿ. ಅದೇ ವಿಶ್ವಾಸಾ. ಈಗಾದ್ರೂ ಏನಾತೂ; ಇಕಾ ಜನಿವಾರಾ ಹಿಡಕೊಂಡು ಹೇಳ್ತೇನಿ; ಈಗ ಮತ್ತ ನನ್ನ ರುಪಾಯಿ ಛೆಲ್ಲಿ ಮಾತಾಡು ಅಂದ್ರ ಒಂದ ತಾಸಿನಾಗ ನಿನ್ನ ರೂಪಾಯಿ ನಿನ್ನ ಮಾರೀಮ್ಯಾಲ ಒಗದ ಬಿಟ್ಟೇನು! ಆದ್ರ ನೀ ಹಾಂಗ ಅಂತೀದೇನು ಹೇಳು!

**ರಾಯರು:**—ಅದು ಹೋಗ್ಲಿ ಬಿಡಪಾ. ಈಗ ನನಗ ಹ್ಯಾಂಗ ಮಾಡಂತೀ ಹೇಳು.

**ರಾಮಾಚಾರಿ:**—ಅದಕ್ಕೇನು ಬೇಕಾದ್ದು ಮಾಡ್ಲಿಕ್ಕೆ ಬಂದೀತು. ಅದೇನೋ ಹೇಳಿದೆಲ್ಲಾ——ನಿನ್ನ ಹೆಂಡ್ತೀ ಹೆಸರ್ಲೆ ಅವರಪ್ಪಾ ಆರ್ನೂರು ರೂಪಾಯ್ದು ಜಮೀನು ಇಟ್ಟಾನ ಅಂದೆಲ್ಲೇ?

**ರಾಯರು:**—ಹೌದು, ಮೊದ್ಲ, ಆಕೀ ಮತ್ತ ಅವರ ತಾಯಿ ಇಬ್ಬರ್ದೂ ಹೆಸರಿತ್ತು———ಆ ಮ್ಯಾಲೆ ಈಗೆಂಟು ತಿಂಗಳ ಹಿಂದ, ನಾವು ಮದ್ವೀಕಾಲಕ್ಕ ಹಾಕಿದ ಸೋಗು ಹೊರಬಿದ್ದಮ್ಯಾಲೆ, ಆಕೀ ತಾಯಿ ಆ ಜಮೀನು ಎಲ್ಲಾ ಆಕೀ ಹೆಸರ್ಲೆ ಮಾಡಿಕೊಟ್ಟಳಲ್ಲಾ—

**ಸುಬ್ಬಣ್ಣ:**—ಆಗ, ಆ ಯುಕ್ತಿಯೆಲ್ಲಾ ಹೇಳಿದವ್ರು ರಾಮಾಚಾರೇ—ಅಲ್ಲ!—ಯಾಕ್ರೀ ರಾಮಾಚಾರ—? ಹ್ಹಾ—ಹ್ಹಾ—ಹ್ಹಾ

**ರಾಮಾಚಾರಿ:**—ಹ್ಹ—ಹ್ಹ——ಹೌದಪ್ಪಾ—ಸುಬ್ಬ್ಯಾ—

**ಸುಬ್ಬಣ್ಣ:**—ಮತ್ತೀಗೂ ಏನಾರೇ ಹೇಳ್ರಿಲಾ ಹಂಚಿಕೀ.

**ರಾಯರು:**—ನಾನೂ ಅದೇ ಅಂತೀನಿ.

**ರಾಮಾಚಾರಿ:**—ಹಂಚಿಕೇನು— ಸುಲಭ ಅದ—. ಇಲ್ನೋಡು ಶ್ರೀಮಂತಾ, ಈಗ ಹ್ಯಾಂಗಾದ್ರೂ ಹೆಂಡ್ತೀನ್ನ ತವರಮನೀಗೆ

ಕಳಿಸಿ ಬಿಟ್ಟೀಯಾ ?—ಅವರಿಗೆ ಸ್ಪಷ್ಟ ಹೇಳಿಬಿಡು——ಆ ಹೊಲಾ ಯೆಲ್ಲಾ ನನ್ನ ಹೆಸರಿಗೆ ಮಾಡಿ ಕೊಡದ ಹೊರ್ತು ನಾ ಯೇನು ಹೆಂಡ್ತೀನ್ನ ಕರಕೊಂಡು ಬರಾವಲ್ಲಾ——ಅಂತ—. ಅಂದ್ರ ಏನ್ ಮಾಡ್ತಾರ ನೋಡೋಣು. ಈ ಬೀಗರಂಬವರ್ನ—ಇಕಾ—ಹೀಂಗೇ ಬಗ್ಗಸಬೇಕು—!—ತಮ್ಮುಡಿಗಿ ಗಂಡನ್ಜೋಡಿಗೆ ಸಂಸಾರಾ ಮಾಡ ಬೇಕು ಅಂತ ಅವರಿಗೆ ಅನಸ್ಸಿದ್ದರ ಹೇಳ್ದೇಕೇಳ್ದ ನಿನ್ನ ಹೆಸರ್ಲೆ ಹೊಲಾ ಮಾಡಿ ಕೊಟ್ಟು, ವ್ಯಾಲೆ ದೀಡನಮಸ್ಕಾರಾ ಹಾಕಿ ದಿಂಡರಕಿ ಉರ ಳ್ತಾರ.—ಯಾಕ. ಹೌದಂತೀಯೋ—ಅಲ್ಲಂತೀಯೋ ಸುಬ್ಬ್ಯಾ—

**ಸುಬ್ಬಣ್ಣ:** -ಅವರಜ್ಜಾ——ಅವರಜ್ಜ ದಿಂಡರಕಿ ಉಳ್ಳ್ಯಾನು!

**ರಾಮಾಚಾರಿ:**—ಅದೇ ಅಂತೀನಿ. ——ಶ್ರೀಮಂತಾ—ನೀ ಅಷ್ಟು ಮಾಡು, ನಾ ಹೇಳಿಧಾಂಗ. ಇಕಾ ನೀ ಇದರೊಳಗ ಹಿಂದ ಮುಂದ ನೋಡಿದ್ರ ಹದಾ ತಪ್ಪೀತು! ಆ ಹುಡಿಗೀ ಅಣ್ಣನೂ ಆ ಹೊಲದಮ್ಯಾಲೆ ಕಣ್ಣಿಟ್ಟಾನ. ಈಗ ನೀ ಬಲೀ ಹಾಕಿದ್ರ ಅದೇ ನೋಡು ನಿನ್ನ ದೈವಾ!——ಏನಂತೀ!

**ರಾಯರು:**—ಅವರು ಇದಕ್ಕ ಒಪ್ಪದಿದ್ದರೇ?

**ಸುಬ್ಬಣ್ಣ:**—ಇನ್ನೊಂದು ಮದ್ವಿ ಮಾಡಕೋತೇನಿ ಅಂತ ಹೆದ್ರಿಕೀ ಹಾಕು.

**ರಾಯರು:**—ಇನ್ನೆಲ್ಲೀ ಮದಿವ್ಯೋ, ಸುಬ್ಬ್ಯಾ—ಹುಚ್ಚಾ!

**ರಾಮಾಚಾರಿ:**-ಅದ್ಯಾಕ, ಶ್ರೀಮಂತಾ! ಇಂಥಾ ಹತ್ತ ಮದ್ವೀ ಮಾಡೇನು ನಿನಗ—ಆ ಮಾತಿಲ್ಲ. ಈಗ ನೀ ನಾ ಹೇಳಿಧಾಂಗ ಮಾಡು. ಬಲೀ ಬಿಲ್ಲಿಕ್ಕೇ ಬೇಕು. ಮುಂದಿನ್ದ್ಯಾತು ನಾ ನೋಡಿಕೋತೇನಿ.

**ರಾಯರು**:—( ಕುಕುಕೊತ್ತ, ಎಡಿಕಿ ಹಾಕಿ, ಒಳ್ಳೇ ಹುರುಪಿನಿಂದ ) ಆಗ್ಲಿ, ರಾಮಾಚಾರೀ--ಅಂತೂ ನಿನ್ನ ಯುಕ್ತಿ ಹೆಚ್ಚು ; ಆ ಹೊಲಾ ನನ್ನ ಹೆಸರ್ಲೇ ಆದ್ರ ಏನ್ ಕೇಳೀ! ಬೇಕಾದಷ್ಟು ಚ್ಯೆನೀ—

**ರಾಮಾಚಾರಿ**:— ಅಲ್ಲೀ—ಮತ್ತ! ಇಲ್ನೋಡು ಶ್ರೀಮಂತಾ, ನೀ ಮೊದ್ಲಿನ್ಹಾಂಗ ಯಾವಾಗ ಆದೀಯೋ ಅಂತ ನನ್ನ ಜೀವ ಚುರು ಚುರು ಅಂತೇದ. ನೀ ಇಷ್ಟ ಕನಿಷ್ಠಕ್ಕ ಬಂದಾಗಿನ್ಹೊತ್ತಿನ್ಹ್ಯಾ, ನನಗ ಜೀವ್ದಾಗ ಜೀವಿಲ್ಲಾ. ನನ್ನ ಮನೆತನಾ ಸಹಿತ ನನಗ ಭಾರಾಗೇದ–.

**ರಾಯರು**:— ಆಗ್ಲಿ ರಾಮಾಚಾರಿ; ನೀ ಹೇಳಿಧಾಂಗ ಮಾಡೇ ಬಿಡ್ತೇನಿ. ನಿನ್ನ ಮಾತು ಗೆದ್ದರ ಎಲ್ಲಾರ್ದೂ ಚಿಂತಿ ತಪ್ಪೇತು! ಯಾಕಣಾ ಸುಬ್ಬ್ಯಾ—

**ಸುಬ್ಬಣ್ಣಾ**:— ಹೌದು ಮಾರಾಯಾ! ಅದಕ್ಕೇ ನಾವೆಲ್ಲಾ ನಿನ್ನ ಮ್ಯಾಲೇ ಜೀವಾ ಇಟಕೊಂಡು ಕೂತೇವಿ.

**ರಾಮಾಚಾರಿ**:—ಶ್ರೀಮಂತಾ ಇದರೊಳಗ ನೀ ಹ್ಯೆಗ್ಯೆ ಮಾಡೇ ಬ್ಯಾಡಾ. ಬೀಗರ ಸಂಗ್ತೀಲೆ--ಅದರೊಳಗ ಹೆಣ್ಣಿನವರ ಸಂಗ್ತೀಲೆ ಕಠೋರರಾಗಿರಬೇಕು ಅಂತ ಶಾಸ್ತ್ರದಾಗೇ ಹೇಳೇದ. ಅದಕ್ಕ ನೀ ಇವತ್ತ ಹೊಂಟೇ ಬಿಡು. ನಾ ಹೇಳಿದ ಮಾತು ಅವರಿಗೆ ಮುಟ್ಟಸೇ ಬಾ. ಮುಂದ ಬಂದದ್ದು ನಾ ನೋಡ್ಕೋತೇನಿ.

**ರಾಯರು**:— ನಾ ಇವತ್ತ ಸಂಜೇ ಮೋಟಾರ್ನ್ಯಾಗ ಹೋಗ್ತೇನಿ. ಈಗಷ್ಟು ತಯಾರೀ ಮಾಡಬೇಕಲ್ಲಾ—ಮನೀಕಡೇ ಹೋಗ್ಲ್ಯಾ— ? ಹಾಂಗಾರೇ! —ರಾಮಾಚಾರೀ–ಸುಬ್ಬಣ್ಣಾ—ನೀವೂ ಇವತ್ತ ನಮ್ಮಲ್ಲೇ ಬಂದ ಬಿಡ್ರಿ ಊಟಕ್ಕ—

**ರಾಮಾಚಾರಿ:**— ಏನ್ ಬ್ಯಾಡಾ ಶ್ರೀಮಂತಾ. ನೀ ಕರದೆಲ್ಲಾ ಶ್ರೀಮಂತಾ! ಉಂಡಕಿಂತಾ ಹೆಚ್ಚಾಗ್ಯೆತು ನೋಡು. ನೀ ಇವತ್ತ ಊರಿಗೆ ಹೋಗಾವಾ! ಮತ್ತ ನಮಗೆಲ್ಲಾ ನೀನೇ ಅಡಿಗ ಮಾಡಬೇಕು. ಯಾಕಿಷ್ಟು ತ್ರಾಸಾ —

**ರಾಯರು:**— ಹಾಂಗಾದ್ರ—ನಾ ಹೋಗ್ಲ್ಯಾ?—ನಮಸ್ಕಾರ—

**ಬಂಡೆಪ್ಪ**
**ಮದ್ದೂ** } :—ನಾವೂ ಬರ್ತೇವಿ ನಿಂದ್ರೋ ಶ್ರೀಮಂತಾ. ಹೋಗ್ತೇವಿ ರಾಮಾಚಾರ. ನಮಸ್ಕಾರಾ!

**ರಾಮಾಚಾರಿ** :—ನಮಸ್ಕಾರ……ನಮಸ್ಕಾರ……

**ಸುಬ್ಬಣ್ಣ** :— ಓಹೋ ನಮಸ್ಕಾರ——— (ಶ್ರೀಮಂತ ಮೊದಲಾದವರು ಹೋದ ಮೇಲೆ) ಮತ್ತೇನೋ ಬಲೀ ಬಿಸೀರಲ್ಲ ರಾಮಾಚಾರರೇ! ಹೊಸಾ ಹಂಚಿಕಿ ಹುಡುಕೀರಿ??——ಏನೋ——ಸ್ವಲ್ಪ ದೂರದೃಷ್ಟಿ ಇಟ್ಟಾಂಗ ಕಾಣಸ್ತದೇ———.

**ರಾಮಾಚಾರಿ:**— ನೀನೂಕಂಡ್ಹಿಡ್ದೆಲ್ಲಾ !—ವಾರೆವಾ !! — ಹಾಂಗಿಲ್ದಿದ್ರ ಹ್ಯಾಂಗಾದೀತು ಸುಬ್ಬ್ಯಾ—! ಈಗ್ನೋಡು ಈ ವರ್ಷಾ ನನ್ನ ಹೆಂಡ್ತೀ ಮತ್ತೊಂದು ಹೆಣ್ಣೀ ಹಡ್ದ್ಯಾಳ——ಸೊಸೀಗೆ ಮರ್ತ್ಲ ಬಸರು——.ಪ್ರಪಂಚಾ ಹೀಂಗ ಬೆಳೀಲಿಕ್ಕೆ ಹತ್ತಿದ ಮ್ಯಾಲ ಏನಾದ್ರೂ ಹಂಚಿಕಿ ಹಾಕ್ಲಿಕ್ಕೆ ಬೇಕೇ!——ಈಗ ನೋಡು ನಿನ್ದೂ ಸಂಸಾರ ಬೆಳೀಲಿಕ್ಕೆ ಹತ್ತಿಲ್ಲೇ?—ಅದರ ವಿಚಾರಾನೂ ನಾನು ಮಾಡ್ಲಿಕ್ಕೇ ಬೇಕು. ನೀ ಸುಮ್ಮನೇ——ನಾ ಹೇಳಿಧಾಂಗ ಕೇಳ್ತಿರು——ನಾ ಮಾಡಿದ್ದು ನೋಡ್ತಿರು——ಇದರೊಳಗ ನಿನ್ದೂ ಫಾಯ್ದೆ ಅದೇ——ತಿಳೀತೇ?? ಬಾ—

ಹೋಗೋಣ ಬಾ (ಹೊರಡುತ್ತ)———ಸುಬ್ಬ್ಯಾ— ಈ ಜಗತ್ತೇನು! ಜಗ್ಗಿಧಾಂಗ ಬಗ್ಗತದೇ— (ಸುಬ್ಬಣ್ಣನನ್ನು ಜಗ್ಗಿಕೊಂಡು ಹೋಗುವನು)

ಸುಬ್ಬಣ್ಣ :— (ಹೋಗಹೋಗುತ್ತ) ನಿಮ್ಮಂಥಾ ಬಗ್ಗಸವ್ರು ಇದ್ದರೇ—

(ಹೋಗುವರು; ತೆರೆ.)

"ಕೃಷ್ಣಕುಮಾರ"

ಡಿಶಂಬರ ೧೯೩೦





ಮುದ್ರಕರು—ಹಿಂ. ರಾ. ಭಿಸೆ, ಕ. ಪ್ರಿಂ. ವರ್ಕ್ಸ, ಧಾರವಾಡ ೧೯೩೨,೪೦,೧೦೦೦.